# ಅರ್ಧನಾರೀಶ್ವರ

(ಸಾಮಾಜಿಕ ಕಥೆ)

ಚಿ. ಸದಾಶಿವಯ್ಯ

ದೇಶೀಯ ವಿದ್ಯಾಶಾಲೆ - ಬೆಂಗಳೂರು ೪.

ಆನಂದ್ ಬ್ರದರ್ಸ್

ಬೆಂಗಳೂರು - ೨.

೧೯೫೧

ಮಾನ್ಯಗೆಳೆಯರಾದ

ಶ್ರೀಮಾನ್ ಜಿ. ಎಸ್. ಆಚಾರ್ಯ

ಮತ್ತು

ಶ್ರೀಮತಿ ಶಕುಂತಲಾ

ಇವರ ವಿವಾಹ ಮಹೋತ್ಸವದ ಶುಭ ಸಮಯದಲ್ಲಿ

ನೂತನ ದಂಪತಿಗಳಿಗೆ, ಸಕಲ ಸನ್ಮಂಗಳನ್ನು ಕೋರಿ

ಈ ಕಥೆಯನ್ನು

ವಿಶ್ವಾಸದ ಕಾಣಿಕೆಯಾಗಿ ಅರ್ಪಿಸಿದ್ದೇನೆ.

— ಸದಾಶಿವಯ್ಯ.

# ಅರ್ಧನಾರೀಶ್ವರ

## ೧

ಅಂದು ವಸಂತರಾಯರ ಮನೆಯಲ್ಲಿ ಎಂದೂ ಇಲ್ಲದ ಸಡಗರ. ಏಕೆಂದರೆ ವಸಂತರಾಯರ ಅವಳಿ ಮಕ್ಕಳಾದ ಅರವಿಂದ ಮತ್ತು ಅಶೋಕ ಇವರಿಬ್ಬರ ಇಪ್ಪತ್ತೈದನೆಯ ಹುಟ್ಟಿದ ಹಬ್ಬದೊಂದಿಗೆ ಅಂದು ಗುರು ಪೂರ್ಣಿಮಾ; ಸಾಲದುದಕ್ಕೆ ಹತ್ತು ವರುಷಗಳ ನಂತರ ಯತೀಶ್ವರರಾದ ಶಿವದಾಸರು ಅಂದೇ ಅವರ ಮನೆಗೆ ಬಂದಿಳಿದಿದ್ದರು. ಬಹುಶಃ ವಸಂತರಾಯರ ಹತ್ತಾರು ಜನ ಸ್ನೇಹಿತರು, ಬಂಧುಗಳ ಜೊತೆಗೆ, ಅರವಿಂದ, ಅಶೋಕ ಇಬ್ಬರೂ ತಮ್ಮ ತಮ್ಮ ಸ್ನೇಹಿತರುಗಳನ್ನೆಲ್ಲಾ ಆಹ್ವಾನಿಸಿದ್ದರು. ತಾಯಿಯಾದ ಕಮಲಮ್ಮನ ಸಡಗರವಂತೂ ಹೇಳತೀರದು. ಹಿಂದಿನ ರಾತ್ರಿಯೆಲ್ಲಾ ನಿದ್ದೆಗೆಟ್ಟು ಪೂಜಾಗೃಹವನ್ನು ಕಾರಣೆ, ಸಾರಣೆ, ತಳಿರು ತೋರಣ

ಗಳಿಂದ ಶೃಂಗರಿಸಿದ್ದರು. ಅಡುಗೆಯವರು ರಾತ್ರಿಯೇ ಲಾಡುಗಳನ್ನು ಕಟ್ಟಿ ಸಿದ್ಧಮಾಡಿಕೊಂಡು, ಬೆಳಿಗ್ಗೆ ಹತ್ತು ಘಂಟೆಯ ವೇಳೆಗೇ ಮಹಾ ನೈವೇದ್ಯಕ್ಕೆ ಭಕ್ಷ್ಯಭೋಜ್ಯಗಳನ್ನು ಸಿದ್ಧಗೊಳಿಸಿದ್ದರು. ಒಂಭತ್ತು ಘಂಟೆಗೆ ಗುರುಪೂಜೆಯು ಪ್ರಾರಂಭವಾಗಿ ತಾಳ ಮೇಳ ಮಂಗಳ ವಾದ್ಯಗಳ ಮಧ್ಯೆ ವಿಜೃಂಭಣೆಯಿಂದ ನಡೆಯುತ್ತ ಬಂದು, ಹನ್ನೊಂದು ಘಂಟೆಗೆ ಸಹಸ್ರನಾಮ ಅಷ್ಟೋತ್ತರಾದಿಗಳು ಮುಗಿದು, ಮಹಾ ನೈವೇದ್ಯವೂ ಆಯಿತು. ಮಂಗಳಾರತಿಯಾದ ನಂತರ ನೆರೆದಿದ್ದ ನೂರಾರು ಜನರು ಬಂದು ಬಂಗಲೆಯ ಮಹಡಿಯ ಮೇಲಿನ ಹಾಲಿನಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ಕುಳಿತರು. ಸ್ವಲ್ಪ ಹೊತ್ತಿನಲ್ಲಿ ವಸಂತರಾಯನು ಶಿವದಾಸರನ್ನು ಕೈಹಿಡಿದು ಕರೆದುಕೊಂಡುಬಂದು, ಹಾಲಿನಲ್ಲಿ ಎದುರಿಗೆ ಗೋಡೆಯ ಪಕ್ಕದಲ್ಲಿ ಅವರಿಗಾಗಿ ಸಿದ್ಧಪಡಿಸಿದ್ದ ಸಿಂಹಾಸನದಲ್ಲಿ ಕೂಡಿಸಿದನು. ಅವರು ಒಳಕ್ಕೆ ಬರುತ್ತಿದ್ದಂತೆಯೇ ನಿಂತಿದ್ದ ಸಮಸ್ತರೂ, ಅವರು ಕೂಡುತ್ತಲೂ ತಮ್ಮ ತಮ್ಮ ಸ್ಥಳದಲ್ಲಿ ಕೂತರು.

ಶಿವದಾಸರಿಗೆ ತೊಂಭತ್ತೈದು ವರುಷಗಳು ಕಳೆದುಹೋಗಿದ್ದರೂ, ಅವರ ವೃದ್ಧ ಮುಖವು ಅಪೂರ್ವ ತೇಜಸ್ಸಿನಿಂದ ಕೂಡಿ, ನೋಡಿದವರು ಆ ತೇಜಸ್ಸನ್ನು ನೋಡುತ್ತಲೇ ಇರುವಂತೆ ಆಕರ್ಷಿಸುತ್ತಿದ್ದಿತು. ಅವರ ಗುಂಡು ಮುಖದಲ್ಲಿ ಸದಾ ಅಲೆಯಾಡುತ್ತಿದ್ದ ಆ ಮುಗುಳ್ನಗೆಯ ಅವಿರಳ ಪ್ರಭಾವು ಅವರ ಅಂತಃಕರಣದ ಅಖಂಡಾನಂದವನ್ನು ಹೊರಸೂಸುತ್ತಿದ್ದಿತು. ಹತ್ತು ವರುಷದ ಹಿಂದೆ ಇದೇ ಜನಸಂದಣಿಯು ಅವರನ್ನು ನೋಡಿ ಆನಂದಿಸಿತ್ತು; ಆ ಜನದ ಪೈಕಿ ಸಮಸ್ತರ ಮೇಲೂ ಹತ್ತು ವರುಷಗಳ ಅವಧಿಯು ತನ್ನ ಪ್ರಭಾವವನ್ನು ಬೀರಿತ್ತು; ಆದರೆ ಶಿವದಾಸರು ರವೆಯಷ್ಟೂ ಬದಲಾಯಿಸಿರಲಿಲ್ಲ. ತಮ್ಮ ಮುಂದೆ ನೆರೆದಿರುವ ಜನಸಂದಣಿಯನ್ನು ಎವೆಯಿಕ್ಕದೆ ಈಕ್ಷಿಸುತ್ತಿದ್ದ ಅವರ ಕಣ್ಣುಗಳು ತುಂಬಿ ತುಳುಕುವ ನಿಷ್ಕಳಂಕ ಪ್ರೇಮದಿಂದ ಮಿಂಚುತ್ತಾ ನಗುತ್ತಿದ್ದುವು. ವಸಂತರಾಯರೂ ಅವರ ಭಾವ ಮೈದುನರಿಬ್ಬರೂ ತೀರ್ಥ, ಪ್ರಸಾದಗಳನ್ನು ತಂದು, ಶಿವದಾಸರ ಅನುಜ್ಞೆಯನ್ನು ಪಡೆದು ಎಲ್ಲರಿಗೂ ಹಂಚಿದರು. ನಂತರ ಮುಗುಟಗಳನ್ನುಟ್ಟು, ಶಲ್ಯವನ್ನು ಹೊದ್ದಿದ್ದ ಅರವಿಂದ ಮತ್ತು ಅಶೋಕರಿಬ್ಬರೂ ಬಂದು ಶಿವ

ದಾಸರ ಪಾದಗಳಲ್ಲಿ ತಲೆಯಿಟ್ಟು ನಮಸ್ಕರಿಸಿದರು. ಶಿವದಾಸರು ಪ್ರೇಮದಿಂದ ಅವರಿಬ್ಬರ ತಲೆಗಳನ್ನೂ ನೇವರಿಸಿ, ಪಕ್ಕದಲ್ಲೇ ಕುಳ್ಳಿರಿಸಿಕೊಂಡರು.

ಕೆಳಗಡೆಯ ಹಾಲ್ ಮತ್ತು ನಡುಮನೆಗಳಲ್ಲಿ ಭೋಜನಕ್ಕೆ ಎಲೆಗಳನ್ನು ಹಾಕಿ ಸಿದ್ಧಪಡಿಸುತ್ತಿರುವ ಸಮಯದಲ್ಲಿ, ಮೇಲ್ಗಡೆ ವಸಂತರಾಯನು ಕೈಮುಗಿದುಕೊಂಡು " ಇನ್ನು ಅರ್ಧ ಘಂಟೆಯಲ್ಲಿ ಭೋಜನಕ್ಕೆ ಸಿದ್ಧವಾಗುತ್ತದೆ ; ಈ ಮಧ್ಯೆ ಪೂಜ್ಯರು ಇಲ್ಲಿ ನೆರೆದಿರುವ ತರುಣರಿಗಾಗಿ ನಾಲ್ಕು ಉಪದೇಶದ ಮಾತುಗಳನ್ನು ಅಪ್ಪಣೆ ಕೊಡಿಸಬೇಕೆಂ"ದು ಶಿವದಾಸರನ್ನು ಬೇಡಿ ತಾನೂ ಕುಳಿತನು. ಶಿವದಾಸರು ತಮ್ಮ ಹಲ್ಲಿಲ್ಲದ ಬಾಯಿ ತೆರೆದು ನಕ್ಕರು. ಅವರ ಬಾಯಿಂದ ಯಾವ ಮಾತುಗಳು ಬಂದಾವೋ ಎಂದು ಎಲ್ಲರೂ ನಿರೀಕ್ಷಿಸುತ್ತಿದ್ದರು. ಅವರಾದರೋ ಸುತ್ತಲೂನೋಡಿ, ಗೋಡೆಯ ಮಧ್ಯೆ ತೂಗುಹಾಕಿದ್ದ ದೊಡ್ಡ ಅರ್ಧ ನಾರೀಶ್ವರ ಚಿತ್ರವನ್ನು ನೋಡುತ್ತಾ ಹಾಗೆ ಕ್ಷಣಕಾಲ ಸುಮ್ಮನಿದ್ದರು. ನಂತರ ತಮ್ಮ ಮೆಲುದನಿಯಲ್ಲಿ ಹೀಗೆಂದು ಅಪ್ಪಣೆ ಕೊಡಿಸಿದರು.

" ನನ್ನ ಪ್ರಿಯ ತಮ್ಮಂದಿರಾ ! ನೀವೆಲ್ಲರೂ ಇಲ್ಲಿ ಇಷ್ಟೊಂದು ಸಡಗರದಿಂದ ನೆರೆದಿರುವುದನ್ನು ನೋಡಿ ನನ್ನ ಅಂತಃಕರಣವು ತುಂಬಿಹೋಗಿದೆ. ಮಾತೇ ಹೊರಡದು. ಹೀಗಿರುವಲ್ಲಿ ನಿಮಗೆ, ಅದೂ ವಿದ್ಯಾವಂತರಾದ ತರುಣರಿಗೆ ನನ್ನಂಥ ಅವಿದ್ಯಾವಂತನಾದ ಮುದುಕನು ಏನುತಾನೇ ಹೇಳಬಲ್ಲೆ ! ಆದರೂ ನಮ್ಮ ಅಭ್ಯಾಗತರಾದ ವಸಂತರಾಯರು ಅಪ್ಪಣೆ ಕೊಡಿಸಿರುವ ಕಾರಣ ನನಗೆ ಅನ್ನಿಸಿದ ಎರಡು ಮಾತುಗಳನ್ನ ಹೇಳುತ್ತೇನೆ. ಈ ಮಾತುಗಳು ನಿಮಗೆ ನೀರಸವಾಗಿ ಕಂಡುಬಂದಲ್ಲಿ ಅದನ್ನು ಕೇವಲ ಈ ಅರವಿಂದ ಮತ್ತು ಅಶೋಕರಿಗೆ ಮಾತ್ರ ಹೇಳಿದೆನೆಂದು ತಿಳಿದುಕೊಳ್ಳಿ. ಈಗ ಅಲ್ಲಿರುವ ಅರ್ಧ ನಾರೀಶ್ವರ ಚಿತ್ರಪಟವನ್ನು ನೋಡಿ. ಅದರಲ್ಲಿ ಅರ್ಧ ಪುರುಷಾಕಾರವೂ ಅರ್ಧ ಸ್ತ್ರೀ ಆಕಾರವೂ ಸೇರಿ ಒಂದು ಈಶ್ವರನ ಚಿತ್ರವಾದಂತೆ ರಚಿಸಲ್ಪಟ್ಟಿದೆ. ನೀವೆಲ್ಲರೂ ಇಂದಲ್ಲ ಮುಂದೆ ವಿವಾಹಿತರಾಗತಕ್ಕವರು. ನಿಮ್ಮ ಕಣ್ಣಿಗೆ ಮೆಚ್ಚಿಕೆಯಾದ ಕುಮಾರಿಯ ಕೈಹಿಡಿದು ಗೃಹಸ್ಥಾಶ್ರಮಕ್ಕೆ ಹೆಜ್ಜೆಯಿಡುವವರು. ಆದುದರಿಂದ ನಿಮಗೆ ಈ ಅರ್ಧ ನಾರೀಶ್ವರ ಚಿತ್ರವು ನಿಮ್ಮ ಭವಿಷ್ಯದ ಬೆಳಕಾಗಿರುವುದು.

" ಪ್ರಪಂಚದಲ್ಲಿ ಗಂಡ ಮತ್ತು ಹೆಂಡತಿ ಇಬ್ಬರು ಸೇರಿ ಒಂದು ಕುಟುಂಬ. ಈ ಗಂಡ ಹೆಂಡಿರ ಜೋಡಿ ಹೇಗಿರಬೇಕೆಂದರೆ ಈ ಅರ್ಧ ನಾರೀಶ್ವರನಂತಿರಬೇಕು. ಗಂಡನಿಗೆ ಹೆಂಡತಿ ಮತ್ತು ಹೆಂಡತಿಗೆ ಗಂಡ ಒಬ್ಬರಿಗೊಬ್ಬರು ಪೂರಕವಾಗಿರಬೇಕು. ಇಬ್ಬರು ಸೇರಿಯೇ ಒಂದು ಗೃಹ. ಇಬ್ಬರಲ್ಲಿ ಒಬ್ಬರಿಲ್ಲದಿದ್ದರೆ ಅದು ಪೂರ್ಣವಾಗುವುದಿಲ್ಲ. ಈ ಜೋಡಿಯಲ್ಲಿನ ವೈವಿಧ್ಯತೆಯೇ ಈ ಪೂರಕದ ಮುಖ್ಯಗುಣ. ಗಂಡು ಹೆಣ್ಣುಗಳ ಸೃಷ್ಟಿಯಲ್ಲಿಯೇ ಪೂರಕದ ಲಕ್ಷಣಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಗಂಡಿನ ದೇಹವು ಧೃಢ; ಹೆಣ್ಣಿನ ದೇಹವು ಕೋಮಲ. ಗಂಡಿನ ಹೃದಯವು ಕಠಿಣ ಮತ್ತು ಸರಳ; ಹೆಣ್ಣಿನ ಹೃದಯವು ಮೆತು. ಗಂಡು ವ್ಯವಹಾರದ ಹೋರಾಟದಲ್ಲಿ ದಕ್ಷ; ಹೆಣ್ಣು ಗೃಹಕೃತ್ಯದ ಚಟುವಟಿಕೆಗಳಲ್ಲಿ ಜಾಣೆ. ಗಂಡು ಗರ್ಜಿಸಬಲ್ಲ; ಹೆಣ್ಣು ಹಾಡಬಲ್ಲಳು. ಹೀಗೆಯೇ ನೀವು ಕೇವಲ ಗಂಡು ಹೆಣ್ಣಿನ ಸೃಷ್ಟಿಯ ವೈವಿಧ್ಯತೆಯನ್ನು ನೋಡುತ್ತ ಹೋದರೆ, ಎರಡೂ ಎರಡು ವಿಪರೀತಗಳೆಂದೂ, ಒಂದಕ್ಕೊಂದು ಸಹಜನಾಗಿ ಸರಳವಾಗಿ ಸೇರಿದಾಗ, ಇಬ್ಬರ ಹೃದಯಗಳೂ ಅಂತಃಕರಣ ಪೂರ್ವಕವಾಗಿ ಪರಿಶುದ್ಧ ವಾತಾವರಣದಲ್ಲಿ ಮೇಳೈಸಿಬಿಟ್ಟರೆ ಅದು ಸುಖಮಯವಾದ ಗೃಹಸ್ಥಾಶ್ರಮವಾಗುವುದೆಂದು ಕಂಡುಬರುತ್ತದೆ.

" ಆದುದರಿಂದ ತರುಣರಾದ ನೀವು ನಿಮ್ಮ ಗೃಹಸ್ಥಾಶ್ರಮಕ್ಕೆ ತಕ್ಕ ಕನ್ಯೆಯರನ್ನು ಆರಿಸುವಾಗ, ಸಮಾನತೆಯನ್ನು ಹುಡುಕ ಹೋಗುವುದು ಸರಿಯಾಗುವುದಿಲ್ಲ; ಸಹಜವಾಗುವುದಿಲ್ಲ. ಹಿತವಾಗುವುದಿಲ್ಲ. ಮುಂದೆ ಜೀವನ ಸುಖಮಯವಾಗುವುದಿಲ್ಲ. ಎಂದರೆ ಈ ಕಾಲದಲ್ಲಿ ಪದವೀಧರರೂ, ಧನಾಢ್ಯರೂ, ಆದ ಕೆಲವು ಸ್ತ್ರೀಯರು " ಪುರುಷರಿಗೂ ನಮಗೂ ಯಾವ ಭೇಧವೂ ಇಲ್ಲ; ನಾವೂ ಅವರಂತೆಯೇ ಮನುಷ್ಯರು. ಅವರು ಮಾಡುವ ಸಮಸ್ತ ವ್ಯಾವಹಾರಿಕ ಕೆಲಸಕಾರ್ಯಗಳನ್ನೆಲ್ಲಾ ನಾವೂ ಮಾಡಬಲ್ಲೆವು. ದೇವರು ನಮಗೆ ಪುರುಷರಿಗಿಂತ ಹೆಚ್ಚು ಬುದ್ಧಿ ಶಕ್ತಿಯನ್ನೇ ಕೊಟ್ಟಿದ್ದಾನೆ. ಆದರೆ ಪುರುಷರು ಕೇವಲ ತಮ್ಮ ಸ್ವಾರ್ಥದಿಂದ ನಮ್ಮನ್ನು ಮುಂದೆ ಬರಲು ಬಿಡದೆ ತುಳಿದು ಅಡುಗೆಯಮನೆಯಲ್ಲಿ ಬಂಧಿಸಿಟ್ಟಿದ್ದಾರೆ. ನಮಗೆ ಸ್ವಾತಂತ್ರ್ಯ ಕೊಟ್ಟರೆ, ಜೀವನದ ಹೋರಾಟದಲ್ಲಿ ನಾವು ಅವರನ್ನು

ಸೋಲಿಸಿ, ಮುಂದೆ ಬಂದುಬಿಡುತ್ತೇವೆಂಬ ಭಯದಿಂದ ನಮ್ಮನ್ನು ಗೃಹಿಣಿಯರನ್ನಾಗಿ ಸೆರೆಯಿಟ್ಟಿದ್ದಾರೆ"........ಇತ್ಯಾದಿ ಇತ್ಯಾದಿಯಾಗಿ ಕಾಲ್ಪನಿಕ ದೂರು ದುಪ್ಪಟಿಗಳನ್ನು ಹೇರಿ, ತಮ್ಮಲ್ಲಿ ತಾವೇ ಭ್ರಮೆಗೊಂಡು, ಸೃಷ್ಟಿ ನಿಯಮವನ್ನೇ ಮರೆತು, ದೇಶಾದ್ಯಂತವೂ ಸಭೆ ಸಮಾರಂಭಗಳನ್ನು ಸೇರಿಸಿ ಕೂಗಾಡುತ್ತಿರುವ ಇಂದು, ನಮ್ಮ ಮಾತು ಅಷ್ಟಾಗಿ ಹಿತವಾಗಲಾರದು. ಆದರೂ ಸತ್ಯಾಂಶವಿದೆಯೇ.

"ವಿದ್ಯಾವಂತನಾದ ತರುಣನು ಅವಿದ್ಯಾವಂತಳಾದ ಕನ್ಯೆಯ ಕೈಹಿಡಿದರೆ, ಅವಳಿಗೆ ಸಾಕಷ್ಟು ವಿದ್ಯಾದಾನಮಾಡಿ, ಅವಳ ಚಿರ ಕೃತಜ್ಞತೆಯನ್ನು ಪಡೆದು ಅನ್ಯೋನ್ಯವಾಗಿ ಜೀವನ ಯಾತ್ರೆಯನ್ನು ಸುಖದಿಂದ ಕಳೆಯಬಹುದು. ಇಲ್ಲದೆ ವಿದ್ಯಾವಂತನಾದ ತರುಣನು ವಿದ್ಯಾವತಿಯನ್ನೇ ಆರಿಸಿ ಮದುವೆಯಾದರೆ, ಅಲ್ಲಿ ಸಮರಸಕ್ಕಿಂತ ಹೆಚ್ಚು ವಿರಸಕ್ಕೇ ಅವಕಾಶ. ಏಕೆಂದರೆ ಹೆಣ್ಣಿಗೆ ಯಾವುದೊಂದು ವಿಶೇಷ ಯೋಗ್ಯತೆಯಿದ್ದರೂ ಅವಳ ಕೋಮಲ ಹೃದಯವನ್ನು ಅಹಂಕಾರದ ಸುಂಟರುಗಾಳಿಯು ಸುತ್ತಿಬಿಟ್ಟಿರುತ್ತದೆ. ಆದುದರಿಂದ ಹೆಣ್ಣು ತನ್ನ ವಿದ್ಯಾಮದದಿಂದ ಗಂಡನನ್ನು ಅಷ್ಟು ವಿಶ್ವಾಸದಿಂದ ಕಾಣದೇ ಹೋದಾಳು. ಹಾಗೆಯೇ ಹಣವಂತನಾದ ತರುಣನು ಬಡ ಕುಟುಂಬದ ಕನ್ಯೆಯ ಕೈಹಿಡಿದರೆ, ಅವಳು ಅವನ ಔದಾರ್ಯಕ್ಕೆ ಚಿರ ಋಣಿಯಾಗಿ, ತುಂಬಿದ ಪ್ರೇಮದಿಂದ ಅವನನ್ನು ಸೇವಿಸಬಯಸುವುದರಿಂದ ಜೀವನವು ಹೆಚ್ಚು ಸುಖಮಯವಾಗಿಯೇ ಇರುವುದು. ಇದಕ್ಕೆ ಪ್ರತಿಯಾಗಿ ಹಣವಂತನಾದ ತರುಣನು ತನ್ನಂತೆ ಹಣವಂತ ಕುಟುಂಬದ ಕನ್ಯೆಯನ್ನು ಮದುವೆಯಾದಲ್ಲಿ, ಅಲ್ಲಿ ಸ್ಪೈರ್ಧೆಯ ಭಾವನೆಯೇ ಹೆಚ್ಚಿ ಗೃಹ ಶಾಂತಿಯನ್ನು ಕಲಕೀತು. ಇದಕ್ಕೂ ವಿಪರೀತವಾಗಿ ಗಂಡಿಗಿಂತ ಹೆಣ್ಣೇ ಹೆಚ್ಚು ವಿದ್ಯಾವತಿಯಾಗಿಯಾಗಲೀ, ಹಣವಂತ ಕುಟುಂಬಕ್ಕೆ ಸೇರಿದವಳಾಗಿಯಾಗಲೀ ಇದ್ದರಂತೂ ಆ ಜೋಡಿಯ ಗೃಹಸ್ಥಾಶ್ರಮವು ಪೂರ್ಣ ವಿರಸಮಯವಾಗಿಬಿಡುವುದು. ಹಾಗಾದರೆ ವರಸಾಮ್ಯವೆಂಬುದೇನು? ಎಂದು ಪ್ರಶ್ನಿಸಿದರೆ, ದೇಹದಾರ್ಢ್ಯ, ವಯಸ್ಸು, ಸಾಮಾನ್ಯ ಬಾಹ್ಯಲಕ್ಷಣಗಳು ಇವುಗಳಲ್ಲಿ ಹೆಚ್ಚು ಸಮಾನತೆಯಿದ್ದರೆ ಸಾಕೆಂಬುದು.

" ಜಗತ್ತಿನಲ್ಲಿ ನುಗ್ಗಾಡುತ್ತಿರುವ ಸಹಸ್ರಾರು ಹೊಸ ಹೊಸ ಭಾವನೆ

ಕಾಮನೆಗಳ ಝಂಝಾವಾತವು ನಮ್ಮ ದೇಶವನ್ನೂ ಸೋಕದೆ ಬಿಟ್ಟಿಲ್ಲ. ಅದರಿಂದಾಗುತ್ತಿರುವ ವಿಪರೀತಗಳನ್ನು ನಾನು ನಿಮಗೆ ವರ್ಣಿಸಬೇಕಾಗಿಲ್ಲ. ಆದರೆ ಇಷ್ಟು ಮಾತ್ರ ಹೇಳಬಲ್ಲೆ. ನಮ್ಮ ದೇಶದ ಭೂಗೋಳ ಖಗೋಳದ ಸ್ಥಿತಿಗತಿಯನ್ನರಿತವರು, ಸರಿಯಾದ ವಯಸ್ಸಿನಲ್ಲಿ ವಿವಾಹವನ್ನೂ, ತ್ರಿಕರಣ ಪೂರ್ವಕವಾದ ಏಕಪತ್ನೀವ್ರತವನ್ನೂ, ಆ ಪತ್ನಿಗೆ ಪರಿಶುದ್ಧವಾದ ಪಾತಿ ವ್ರತ್ಯವನ್ನೂ ಕಟ್ಟುಮಾಡಿ– ಇದೇ ಗೃಹಸ್ಥಾಶ್ರಮಿಗಳ ಸುಖಶಾಂತಿಗೆ ಮೂಲವೆಂದಿದ್ದಾರೆ. ಇದನ್ನು ಮೀರಿ ಇತರ ದೇಶದವರ ಕಾಣದೆ ಕೇಳಿದ, ಕಂಡು ಕೇಳದೇ ಊಹಿಸಿದ, ಕಾಲ್ಪನಿಕ ಕೃತ್ರಿಮ ಜೀವನದ ಅನುಕರಣವು ನಮ್ಮ ದೇಶಕ್ಕೆ ಪೂರ್ಣ ಅಹಿತವಾದದ್ದು.

"ಪರಸ್ಪರ ಕೈಹಿಡಿದು, ಗೃಹಸ್ಥಾಶ್ರಮಕ್ಕೆ ಕಾಲಿಟ್ಟ ದಂಪತಿಗಳಲ್ಲಿ ಯಾರು ಮುಖ್ಯ, ಯಾರು ಅಮುಖ್ಯ, ಯಾರು ಹೆಚ್ಚು, ಯಾರು ಕಡಿಮೆ ಎಂಬ ಪ್ರಶ್ನೆಯಿಲ್ಲ. ಒಬ್ಬರಿಗೊಬ್ಬರು ಪೂರಕ; ಒಬ್ಬರನ್ನುಬಿಟ್ಟು ಒಬ್ಬರಿ ರುವಂತಿಲ್ಲ. ಇಷ್ಟೇ ತತ್ವ. ಪ್ರಾಣವನ್ನುಬಿಟ್ಟ ದೇಹವೂ, ದೇಹವನ್ನು ಬಿಟ್ಟ ಪ್ರಾಣವೂ ಹೇಗೆ ಇರಲಾರವೋ ಹಾಗೆಯೇ ದಂಪತಿಗಳು ಅನ್ಯೋನ್ಯ ವಾಗಿ, ಪರಸ್ಪರಪೂರಕವಾಗಿದ್ದರೆ, ಆ ಗೃಹಸ್ಥಾಶ್ರಮವು ಅರ್ಧನಾರೀಶ್ವರನಂತೆ ಪ್ರಶಾಂತವಾಗಿ, ಸುಖಮಯವಾಗಿ ಪೂರ್ಣವಾಗಿರುತ್ತದೆ.

"ತರುಣರಾದ ನೀವುಗಳು ಇಂದಲ್ಲ ನಾಳೆ ನಿಮಗೆ ಯೋಗ್ಯವಾದ ಗೃಹಿಣಿಯರನ್ನು ಆರಿಸುವಾಗ ಈ ಅರ್ಧನಾರೀಶ್ವರನು ನಿಮ್ಮ ಸ್ಮೃತಿ ಪಥದಲ್ಲಿರಲಿ. ಈ ಅನುಭವದಮಾತು ಯಾರೊಬ್ಬರಿಗೂ ಪಥ್ಯವಾಗದೇ, ಪ್ರತಿಯೊಬ್ಬನೂ ಸ್ವೇಚ್ಛಾ ಪ್ರವೃತ್ತಿಯಿಂದಕೂಡಿ ಉಚ್ಛೃಂಕಲನಾಗಿ ವಿಚರಿಸುತ್ತಿರುವ ಈ ಕಾಲದಲ್ಲಿ ವಿದ್ಯಾವಂತರಾದ ನೀವೆಲ್ಲರೂ ಇಷ್ಟು ಹೊತ್ತೂ, ಈ ಮುದುಕನ ನಾಲ್ಕು ಮಾತುಗಳನ್ನ ಇಷ್ಟೊಂದು ತಾಳ್ಮೆಯಿಂದ ಕೇಳಿದ್ದು ನನ್ನ ಪುಣ್ಯ. ನಿಮ್ಮನ್ನು ಕೈಹಿಡಿಯುವ ನಿಮ್ಮ ಭಾವೀ ಪತ್ನಿ ಯರ ಭಾಗ್ಯ." ಎಂದು ನಕ್ಕು ಸುಮ್ಮನಾದರು.

ಈ ವೇಳೆಗೆ ವಸಂತರಾಯನ ಭಾವ ಮೈದುನರಿಬ್ಬರೂ ಬಂದು ಬಾಗಿಲಬಳಿ ನಿಂತಿದ್ದವರು ಭಾವನಿಗೆ ಸನ್ನೆಮಾಡಿದರು. ವಸಂತರಾಯ

ನೆದ್ದು ಕೈಮುಗಿದು, 'ಎಲ್ಲರೂ ಭೋಜನಕ್ಕೆ ದಯಮಾಡಿಸಬೇಕೆಂ'ದು ಹೇಳಿದ. ನೆರೆದಿದ್ದ ತರುಣರೆಲ್ಲರೂ, ಇತರ ಹಿರಿಯರು ಕಿರಿಯರೂ ಶಿವದಾಸರನ್ನು ನೋಡಿ ನಮಸ್ಕರಿಸಿ ಕೆಳಕ್ಕಿಳಿದು ಬಂದುಬಿಟ್ಟರು. ನಂತರ ಅರವಿಂದ ಮತ್ತು ಅಶೋಕ ಇಬ್ಬರೂ ಆ ಮುದುಕರನ್ನು ಕೈಹಿಡಿದು ಮೆಲ್ಲಗೆ ಕೆಳಕ್ಕಿಳಿಸಿಕೊಂಡುಬಂದು ನಡುಮನೆಯಲ್ಲಿ ಅವರಿಗಾಗಿ ಸಿದ್ಧಮಾಡಿದ್ದ ಮುಗುಟಹಾಸಿದ ಮಣೆಯ ಮೇಲೆ ಕೂಡಿಸಿ, ಅವರ ಅಕ್ಕಪಕ್ಕದಲ್ಲಿ ಸ್ವಲ್ಪ ದೂರದಲ್ಲಿ ಇಬ್ಬರೂ ಕೂತರು. ಗುರುಭಜನೆಯಾದ ನಂತರ ಕ್ಷಣಕಾಲ ನಿಶ್ಶಬ್ದ; ನಂತರ ಪ್ರಾರಂಭವಾದ 'ಗಿಜಿಬಿಜಿ' ಶಬ್ದವೂ ಊಟದೊಂದಿಗೇ ತಡೆಯಿಲ್ಲದೆ ಕೇಳಿಬರುತ್ತಿದ್ದಿತು.

೨

ಅರವಿಂದ ಮತ್ತು ಅಶೋಕ ಇಬ್ಬರಲ್ಲಿ ಅರವಿಂದ ಸ್ವಲ್ಪ ಕೆಂಚು; ಅಶೋಕನು ಸ್ವಲ್ಪ ಕಪ್ಪು. ಅರವಿಂದನು ತಂದೆಯಂತೆ ತೆಳುದೇಹದ ಕೋಲುಮುಖದವನಾಗಿದ್ದ. ಅಶೋಕನು ತಾಯಿಯಂತೆ ಸ್ವಲ್ಪ ಪುಷ್ಟ ದೇಹದ ಗುಂಡು ಮುಖದವನಾಗಿದ್ದ. ಆದರೆ ವಿದ್ಯೆಯಲ್ಲಿ ಇಬ್ಬರೂ ಬುದ್ಧಿವಂತರು. ಬಿ.ಎ. ಪರೀಕ್ಷೆಯನ್ನು ಮುಗಿಸಿಕೊಂಡು, ಅರವಿಂದನು ಬಿ.ಎಲ್. ಪರೀಕ್ಷೆಗೂ, ಅಶೋಕನು ಎಂ.ಎ. ಪರೀಕ್ಷೆಗೂ ಕೂತು ತಮ್ಮ ಇಪ್ಪತ್ತ ಮೂರನೇ ವಯಸ್ಸಿಗೇನೇ ಉತ್ತೀರ್ಣರಾಗಿದ್ದರು. ಅರವಿಂದನು ಅದೇ ಊರಿನ ಹಿರಿಯ ಲಾಯರೊಬ್ಬರಲ್ಲಿಗೆ ಹೋಗಿಬರುತ್ತಾ ಆ ಕಸುಬಿನ ಮರ್ಮಗಳನ್ನೆಲ್ಲಾ ಅರಿಯಲು ಹವಣಿಸುತ್ತಿದ್ದ. ಅಶೋಕನು ಕಾಲೇಜಿನ ಉಪಾಧ್ಯಾಯಗಿರಿಯಲ್ಲಿ ಸೇರಿ ತನ್ನ ಕಸುಬಿನಲ್ಲಿ ಆಗಲೇ ಎಂಟು ತಿಂಗಳು ಹಳಬನಾಗಿದ್ದ. ಆದುದರಿಂದ ಮಕ್ಕಳಿಗೆ ಮದುವೆ ಮಾಡಿಬಿಡಬೇಕೆಂದು ಸಂಕಲ್ಪಿಸಿ, 'ಮದುವೆ ಸದ್ಯಕ್ಕೆ ಒಲ್ಲೆ'ನೆಂದು ಹೇಳುತ್ತಿದ್ದ ಅರವಿಂದನಿಗೆ ಹಿರಿಯರಿಂದ ಎರಡುಮಾತು ಹೇಳಿಸಿ, ಅವರ ಸಮ್ಮುಖದಲ್ಲೇ ಲಗ್ನಗಳೆರಡನ್ನೂ ನಡೆಸಬೇಕೆಂದು ಬಯಸಿ, ಮಂಗಳೂರಿನಿಂದ ತನಗೆ ಪೂಜ್ಯರಾದ ಶಿವದಾಸರನ್ನು ಕರೆದುಕೊಂಡು ಬಂದಿದ್ದ. ಪರಿಸ್ಥಿತಿಯನ್ನು ಅರಿತೇ ಆ ವೃದ್ಧರೂ ಕೂಡಾ ಅರವಿಂದ ಅಶೋಕರಿಬ್ಬರನ್ನೂ ಉದ್ದೇಶಿಸಿ ಅಂದು

ಆ ರೀತಿ ತಿಳಿವಳಿಕೆ ಹೇಳಿದುದು. ಅವರ ಮಾತುಗಳು ಅಶೋಕನ ಮನಸ್ಸಿನ ಮೇಲೆ ಪೂರ್ಣ ಪ್ರಭಾವಶಾಲಿಯಾಗಿ ಪರಿಣಾಮವನ್ನುಂಟು ಮಾಡಿದ್ದುವು. ಆದರೆ ಅರವಿಂದನು 'ತಂದೆಯು ಅವರಿಗೆ ಹೇಳಿಕೊಟ್ಟು ಆ ರೀತಿ ಹೇಳಿಸಿದ'ನೆಂದು ತಿಳಿದು ತನ್ನ ಹಠವನ್ನು ಇನ್ನೂ ಬಲಪಡಿಸಿ ಕೊಂಡನು.

ಶಿವದಾಸರು ಬಂದುಹೋಗಿ ಒಂದುವಾರ ಕಳೆದುಹೋಯಿತು. ಆದರೂ ಅರವಿಂದನು ಮದುವೆಗೆ ಒಪ್ಪುವ ಸೂಚನೆಯಾವುದೂ ಕಂಡು ಬರಲಿಲ್ಲ. ವಸಂತರಾಯನು ನೋಡಿಕೊಂಡು ಬಂದಿದ್ದ ಎಂಟು ಹೆಣ್ಣುಗಳ ಪೈಕಿ, ಅಶೋಕನೇನೋ ತನ್ನ ಹೈಸ್ಕೂಲು ವಿದ್ಯಾಭ್ಯಾಸದಲ್ಲಿ ತನಗೆ ಇಂಗ್ಲೀಷ್ ಉಪಾಧ್ಯಾಯರಾಗಿದ್ದು ರಿಟೈರ್ಡ್ ಆಗಿದ್ದ ಭುಜಂಗರಾಯರ ಮೂರನೆಯ ಮಗಳು ಅನ್ನಪೂರ್ಣೆಯನ್ನು ಮದುವೆಯಾಗಲು ಒಪ್ಪಿದನು. ಅನ್ನಪೂರ್ಣೆಯು ಫೋರ್ತ್‌ಫಾರಂ ಪೂರ್ತಿ ಓದಿ ನಂತರ ತನ್ನ ತಾಯಿಯ ಒತ್ತಾಯಕ್ಕೆ ಶಾಲೆಗೆ ಹೋಗುವುದನ್ನು ನಿಲ್ಲಿಸಿಬಿಟ್ಟು, ಮನೆಯಲ್ಲಿಯೇ ತಾಯಿ ಯಿಂದ ವೀಣೆ ಪಾಠವನ್ನೂ ಹೇಳಿಸಿಕೊಳ್ಳುತ್ತಾ, ಮಧ್ಯೆ ಅಡುಗೆ, ಒಪ್ಪ, ಓರಣೆ, ಹೊಲಿಗೆ, ಕಸೂತಿಯೇ ಮೊದಲಾದ ಗೃಹಕೃತ್ಯ ನಿರ್ವಹಣದ ಕೆಲಸಗಳನ್ನು ಕಲಿತು ಪ್ರವೀಣಳಾಗಿದ್ದಳು. ವಯಸ್ಸು ಹದಿನಾರು ತುಂಬಿ ಹದಿನೇಳರಲ್ಲಿತ್ತು. ವಸಂತರಾಯನು ತಾನು ಸಾಕಷ್ಟು ಧನಿಕನಾಗಿದ್ದರೂ ತಾನು ಆರ್ಜಿಸಿದ ಧನವನ್ನು ಸಾಧುಸಂತರ ಸೇವೆಗೆ, ಧರ್ಮ ಸಂಸ್ಥೆಗಳ, ವಿದ್ಯಾರ್ಥಿವೃಂದದ ಸಹಾಯಕ್ಕಾಗಿ ಧಾರಾಳವಾಗಿ ವಿನಿಯೋಗಿಸುತ್ತಿದ್ದ ನಲ್ಲದೆ, ಯಾವ ಬಗೆಯಾದ ಹಣದ ಮಮತೆಯನ್ನೂ ತಾಳದೆ ನಿರ್ವಿಕರನಾ ಗಿದ್ದನಾದುದರಿಂದ, ತನ್ನ ಮಕ್ಕಳಿಗೆ ಅವರು ಇಚ್ಛಿಸಿದ ಕುಟುಂಬದಿಂದ ಹೆಣ್ಣು ತರಲು ಯಾವಬಗೆಯಾದ ಮಾನಸಿಕ ನಿರ್ಭಂಧವನ್ನೂ ಇಟ್ಟುಕೊಂಡಿರಲಿಲ್ಲ. ಅಶೋಕನು 'ತಾನು ಭುಜಂಗರಾಯರ ಮಗಳನ್ನು' ವಿವಾಹವಾಗುವುದಾಗಿ ತಂದೆಗೆ ತಿಳಿಸಿದಾಗ ವಸಂತರಾಯನು ಕ್ಷಣಕಾಲ ಯೋಚಿಸಿದನು. ಎಂಟು ಹೆಣ್ಣುಗಳ ಪೈಕಿ ಡೆಪ್ಯುಟಿ ಕಮೀಷನರ್ ಮನೆಯ ಕನ್ಯೆಯಿಂದ ಹಿಡಿದು ನಗದೀ ಗುಮಾಸ್ತೆಯ ಮನೆಯ ಕನ್ಯೆಯವರೆಗೂ, ಯೌವನ ಸೌಂದರ್ಯ ಗಳಿಂದ ಕೂಡಿದ, ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣವಾಗಿರುವಂಥ ಹೆಣ್ಣು

ಗಳೆಲ್ಲಾ ಇದ್ದರೂ, ಅಶೋಕನು ಈ ಬಡ ಉಪಾಧ್ಯಾಯನ ಮನೆಯ ಅಷ್ಟು ಚೆಲುವೆಯಲ್ಲದ ಹೆಣ್ಣನ್ನೇ ಆರಿಸಿರುವುದು, ಶ್ರೀ ಶಿವದಾಸರ ಉಪದೇಶ ವಾಣಿಯ ಪ್ರಭಾವದಿಂದ. ನಿಸ್ವಾರ್ಥಿಗಳಾದ ಯತಿ, ಸಾಧು, ಸಾತ್ವಿಕರ ಲೋಕಾನುಭವದ ಮಾತುಗಳು, ಸದಾ ಮಂಗಳಕರವಾದವು, ಶ್ರೇಯಃ ಪ್ರದವಾದುವು. ಆದುದರಿಂದ ಅಶೋಕನ ಮದುವೆಯಂತೂ ನಿಶ್ಚಯ ವಾದಂತೆ; ಆದರೆ ಅರವಿಂದನು ಹೆಣ್ಣುಗಳಲ್ಲಿ ಒಂದನ್ನೂ ಒಪ್ಪಲಿಲ್ಲ. ಅವನು ಲಾ ಓದಿದವನಾದ ಕಾರಣ ಅವನೊಂದಿಗೆ ನಾನು ಯಾವ ವಿಧವಾದ ವೈಯ ಕ್ತಿಕ ವಿಚಾರದಲ್ಲಿ ಚರ್ಚೆ ಮಾಡುವುದೂ ಕಷ್ಟ; ಆದರೂ ಕೇವಲ ಕರ್ತವ್ಯ ದೃಷ್ಟಿಯಿಂದ ಅವನ ಇಂಗಿತವನ್ನು ತಿಳಿದು, ನಂತರ ಮುಂದಿನೇರ್ಪಾಟನ್ನು ಮಾಡಬೇಕೆಂದು ಬಯಸಿ, ಆ ದಿನ ರಾತ್ರಿಊಟವಾದನಂತರ ಅರವಿಂದನನ್ನು ಕುರಿತು "ಮಗೂ! ನಾನು ನಿನ್ನ ಸಂಗಡ ಒಂದೆರಡು ಸ್ವಂತವಿಚಾರಗಳನ್ನು ಮಾತನಾಡಬೇಕಾಗಿದೆ. ಈಗ ನಿನಗೆ ಒಂದರ್ಧ ಘಂಟೆ ಬಿಡು ವಿದೆಯೇ?" ಎಂದನು. ಅರವಿಂದನು ಈ ಪ್ರಶ್ನೆಯನ್ನು ಕೇಳುತ್ತಲೇ ವಿಚಾರವೇನೆಂದು ಗ್ರಹಿಸಿಬಿಟ್ಟ; ಆದರೂ ತಂದೆಯು ಕೇಳುತ್ತಿರುವಾಗ ತಪ್ಪಿಸಿಕೊಳ್ಳುವುದು ತಾನೇಹೇಗೆ. ಅಲ್ಲದೆ "ಎಂದಾದರೂ ಒಂದು ದಿನ ಹೇಳಲೇಬೇಕಾದ ವಿವಾಹ–ಗೃಹಸ್ಥಾಶ್ರಮಗಳ ವಿಚಾರವಾಗಿ ತನ್ನ ಹೃದಯದಲ್ಲಿ ಸ್ಥಿತವಾಗಿ ರುವ ಅಭಿಪ್ರಾಯಗಳನ್ನು ಹೇಳಿ ಬಿಡಲು ಇದೊಂದು ಸದವಕಾಶವೇ ಆಯಿತು. ಈಗಲೇ ತನ್ನ ಭವಿಷ್ಯ ಜೀವನದ ರೂಪರೇಖೆಗಳ ಪರಿಚಯ ವನ್ನು ತಾಯಿ ತಂದೆಗಳಿಗೆ ಮಾಡಿಸಿ ಬಿಡುವುದರಿಂದ, ಅವರ ಹೃದಯದಲ್ಲಿ ವರ್ಷಾನುಗಟ್ಟಲೆಯಿಂದ ಗೂಡುಮಾಡಿಕೊಂಡು ವೃದ್ಧಿಸುತ್ತಿರುವ ಆಶಾಚಿತ್ರ ಗಳು ಮತ್ತಷ್ಟುಬಣ್ಣವೇರಿ ಅವರನ್ನು ಅಪಾರ ನಿರಾಶೆಯಲ್ಲಿ ಮುಳುಗಿಸುವ ದುರಂತದಿಂದ ತಪ್ಪಿಸಿದಂತಾಗುತ್ತದೆ." ಎಂದು ಲೆಕ್ಕ ಹಾಕಿ "ಬನ್ನಿ ಅಪ್ಪಾ! ಮಾತನಾಡೋಣ" ಎಂದು ತಂದೆಯನ್ನು ತನ್ನ ರೂಮಿಗೆ ಕರೆದು ಕೊಂಡು ಹೋಗಿ, ಆತನು ಕೂತನಂತರ ತಾನು ಅವನ ಪಕ್ಕದಲ್ಲೇ ಕೂತನು.

**ವಸಂತರಾಯ:** (ಮಗನ ಬೆನ್ನು ಸವರಿ) ಅರವಿಂದ! ಈ ವರುಷ ನಿಮ್ಮಿಬ್ಬರ ಮದುವೆಗಳನ್ನೂ ಮಾಡಿಬಿಡಬೇಕೆಂದು ನಾನೂ ನಿಮ್ಮಮ್ಮನೂ ನಿಶ್ಚಯಿಸಿದ್ದೇವೆ; ಇದುವರೆಗೆ ಬಂದಿರುವ ಎಂಟುಹೆಣ್ಣುಗಳ ಪೈಕಿ ಅಶೋಕ

ನೇನೊ ಇಂಗ್ಲಿಷ್ ಮೇಷ್ಟರು ಭುಜಂಗರಾಯರ ಮಗಳು ಅನ್ನಪೂರ್ಣೆಯನ್ನು ಮದುವೆಯಾಗಲು ಒಪ್ಪಿದಾನೆ. ನೀನಿನ್ನೂ ಯಾವಹುಡುಗಿಯ ವಿಚಾರವಾಗಿಯೂ ನಿರ್ಧಾರಕ್ಕೆ ಬಂದಂತಿಲ್ಲ.

**ಅರವಿಂದ:** ಹೌದಪ್ಪ.

**ವಸಂತರಾಯ:** ಅದೇಕೆ! ಈ ಎಂಟು ಹೆಣ್ಣುಗಳ ಪೈಕಿ ನಿನಗೆ ಒಪ್ಪಿಗೆಯಾಗುವಂಥ ಕನ್ಯೆ ಒಬ್ಬಳೂ ಇಲ್ಲವೇ ?

**ಅರವಿಂದ:** ಹಾಗಲ್ಲಪ್ಪಾ! ನಾನು ಇಷ್ಟು ಸಣ್ಣ ವಯಸ್ಸಿನಲ್ಲೇ ಮದುವೆಯಾಗಲು ಇಷ್ಟಪಡುವುದಿಲ್ಲ.

**ವಸಂತರಾಯ:** ನಿನ್ನ ಯಾವಯಸ್ಸಿಗೆ ಮದುವೆಯಾಗಬೇಕೆಂದಿದ್ದೀ ?

**ಅರವಿಂದ:** ನನಗೆ ನಲವತ್ತನೆಯ ವಯಸ್ಸಾದಮೇಲೆ.

**ವಸಂತರಾಯ:** (ನಿರಾಶೆಯಿಂದ) ಅರವಿಂದಾ !!

**ಅರವಿಂದ:** ಕೇಳಪ್ಪ! ನಮ್ಮ ದೇಶದಲ್ಲಿ ಇದುವರೆಗೂ ನಡೆದಿರೋ ಈ ವಿವಾಹ ಪದ್ಧತಿಗಳು, ಇವುಗಳ ರೀತಿ ನೀತಿಗಳು, ಇವುಗಳ ಕ್ರಮ ಪರಿಕ್ರಮಗಳು, ಒಂದೂ ನನ್ನ ಮನಸ್ಸಿಗೆ ಒಪ್ಪಿಗೆಯಾಗಿಲ್ಲ. ಎಂಟನೇ ಎಡ್ವರ್ಡನಾಗಿದ್ದ ವಿಂಡ್ಸರ್ ತನ್ನ ನಲವತ್ತನೆಯ ವಯಸ್ಸಾದ ಮೇಲೆ ಮದುವೆಯ ಯೋಚನೆ ಮಾಡಿದ. ಪ್ರಪಂಚದ ಯಾವ ದೇಶದಲ್ಲೂ ಹದಿನೈದು ಹದಿನಾರು ವರುಷದ ಹುಡುಗಿಗೆ ಮದುವೆಯಿಲ್ಲ. ಮದುವೆ ಹಾಗಿರಲಿ ಅದರ ಕಲ್ಪನೆ ಸಹಾ ಇರುವುದಿಲ್ಲ. ನಮ್ಮ ದುರಾದೃಷ್ಟದ ದೇಶದಲ್ಲಿ ಹುಟ್ಟಿದಾರಭ್ಯ ಮಕ್ಕಳ ಕಿವಿಯಲ್ಲಿ ಗಂಡು–ಹೆಣ್ಣು, ಮದುವೆ, ಮಕ್ಕಳು ಈ ವಿಜೃಂಭಣೆಯ ಮಾತುಗಳೇ ಕೇಳಿ ಬರೋದು. ನಮ್ಮ ಮಕ್ಕಳು ಆಟವಾಡಿದರೂ ಹೆಚ್ಚಾಗಿ ಗಂಡ ಹೆಂಡತಿ ಆಟಾನೇ ಆಡೋದು,ಅವುಗಳಿಗೆ ಆಡೋದಕ್ಕೆ ನಾವು ಕೊಡೋ ಸಲಕರಣೆಗಳೂ ಒಂದು ಗಂಡು ಬೊಂಬೆ ಒಂದು ಹೆಣ್ಣು ಬೊಂಬೆ. ಹೀಗಾಗಿ ನಮಗೆ ಮದುವೆ ವಿವಾಹಿತ ಜೀವನ, ಸಂತಾನ, ಮಕ್ಕಳು, ಮೊಮ್ಮಕ್ಕಳು ಈಸುಳಿಗಳ ಮಧ್ಯೆ ಸಿಕ್ಕಿಕೊಂಡು ನರಳೋದೇ ಜೀವನದ ಪರಮೋದ್ದೇಶವಾಗಿ ಪರಿಣಮಿಸಿ; ಬಿಟ್ಟಿದೆ ಇದು ಮಹಾ ಹೀನಸ್ಥಿತಿ. ಜೀವನದ ಉದ್ದೇಶಗಳು

ಬೇರೆ ಬೇರೆ ಇವೆ. ಘನತರವಾಗಿವೆ. ಮಹೋನ್ನತವಾಗಿವೆ. ಕೇವಲ ಮೃಗಗಳ ಹಾಗೆ ಇಪ್ಪತ್ತು ವರುಷಕ್ಕೇನೆ ಒಂದು ಹದಿನೈದು ವರುಷದ ಹೆಣ್ಣನ್ನುಕೂಡಿ, ಪ್ರಪಂಚ ಪರಿಜ್ಞಾನವಿಲ್ಲದ ಆ ಅರಿಯದಮಗುವಿನ ಸಂಗಡ ವಿಷಯಾಸಕ್ತನಾಗಿ, ಬಲಿಯದ ಕಾಯಿಲೆ ಕಸಾಲೆಯ ಮಕ್ಕಳನ್ನೋ ಹುಳುಗಳನ್ನೊ ಹೆತ್ತು ಹೊತ್ತು ಅವುಗಳನ್ನು ಸಾಕೋದರಲ್ಲಿ ಬಡವಾಗಿ ಅನ್ನ ನೀರಿಲ್ಲದೆ, ಮೂವತ್ತು ವರುಷಕ್ಕೆ ಕಾಲುಚಾಚಿ ಕಣ್ಮುಚ್ಚಿಬಿಟ್ಟರೆ ಪುರುಷಾರ್ಥಗಳು ಸಾಧನೆಯಾಗಿ ಬಿಟ್ಟವೇ!.........ಅಪ್ಪ! ನನಗೀಸ್ಥಿತಿ ಮಹಾ ಭಯಂಕರವಾಗಿ ಕಾಣುತ್ತೆ. ಹೆಣ್ಣಿಗೆ ಹದಿನೈದು ವರುಷವಾದ ಮೇಲೆ ಬೆಳೆವಣಿಗೆ ಪ್ರಾರಂಭ–ನಾವು ಬೆಳೆದು ಮುಗಿದಿದೇಂತ ತಪ್ಪು ತಿಳೀತೇವೆ. ಆ ಎಳೇ ಹುಡುಗಿಯನ್ನು ತಾಯಿಯಾಗಲು ಎಳೆದಾಡುತ್ತೇವೆ. ಅರಿಯದ ಅವು ಮೂಗು ಜಂತುಗಳ ಹಾಗೆ ಈ ಕತ್ತರಿಗೆ ಬಲಿಯಾಗಿ ಬಿಡುತ್ತವೆ. ನನಗಿದು ಸ್ವಲ್ಪವು ಒಪ್ಪಿಗೆಯಿಲ್ಲ.

**ವಸಂತರಾಯ :** ಅರವಿಂದ! ಸ್ವಚ್ಛಂದವಾದ ಸ್ಥಿತಿಯನ್ನು ನೀನು ಗಲಿಬಿಲಿ ಮಾಡಿಕೊಂಡು ಇಲ್ಲದ ಕಾರ್ಪಣ್ಯಗಳನ್ನು ಊಹೆ ಮಾಡಿಕೊಂಡು, ಕೇವಲ ಕಲ್ಪನೆಯ ಕಗ್ಗತ್ತಲ್ಲಿನ ಕೊಣೇಲಿ ಪರದಾಡುತಿದೀಯೆ. ನೋಡು ನಾನು ನಿಮ್ಮಮ್ಮನನ್ನ ಮದುವೆಯಾದಾಗ ನನಗೆ ಇಪ್ಪತ್ತೆರಡುವರುಷ ವಯಸ್ಸು; ನಿಮ್ಮಮ್ಮನಿಗೆ ಹದಿನಾಲ್ಕು ವರುಷ ವಯಸ್ಸು. ನಾವು ಮದುವೆಯಾದೆವು ಅಂದಮಾತ್ರಕ್ಕೇ ಸಂಸಾರಕ್ಕೇನೆ ಪ್ರಾರಂಭಿಸಿಬಿಟ್ಟೆವೂಂತಲೇ! ಛೀ! ಛೀ!.....ಕಣ್ಣುಮುಂದೆ ಓಡಾಡುವ ಊರಿನ ನೂರಾರುಹೆಣ್ಣುಗಳ ರೂಪುಗಳು ಕ್ಷಣಕಾಲ ದೃಷ್ಟಿಯಮುಂದೆ ಸುಳಿದುಹೋದರೂ, ಒಳಗಣ್ಣಿನಮುಂದೆ ನನ್ನವಳಾಗಿರುವ ಕನ್ಯೆಯ ಚಿತ್ರವು ಅಚ್ಚಳಿಯದೆ ನಿಂತು ಮನಸ್ಸನ್ನು ಸಮಾಧಾನದಲ್ಲಿಟ್ಟಿರುತ್ತಿತ್ತು. ನನ್ನ ಮನಸ್ಸಿಗೆ ಹುಡುಗಿಯ ಹುಡುಗಾಟವಿರಲಿಲ್ಲ. ಹುಡುಗಿಗೂ ಹಾಗೆಯೇ ನೂರಾರು ತರುಣರು ಅವಳ ದೃಷ್ಟಿಪಥದಲ್ಲಿ ಸುಳಿದಾಡಿದರೂ, ತನ್ನನ್ನು ವರಿಸಿದ್ದವನ ಮೂರ್ತಿಯು ಅವಳ ಅಂತಃಕರಣದಲ್ಲಿ ತುಂಬಿ ಸಮಾಧಾನವನ್ನು ತಂದುಕೊಟ್ಟಿತ್ತು. ಆರುವರುಷಗಳನಂತರ ಅಂದರೆ ನನ್ನ ಇಪ್ಪತ್ತೆಂಟನೆಯ ವಯಸ್ಸಿಗೆ ನಿಮ್ಮಮ್ಮನ ಇಪ್ಪತ್ತನೇ ವಯಸ್ಸಿಗೆ ನಮಗೆ ದೈಹಿಕ ವಿವಾಹವಾಯಿತು. ಮೂರುವರುಷಗಳನಂತರ ಒಂದು

ಹೆಣ್ಣು ಮಗುವಾಗಿ ಹೋಯಿತು. ಮತ್ತೆರಡುವರುಷಗಳ ಮೇಲೆ ಗುರುಕೃಪೆ ಯಿಂದ ನೀವಿಬ್ಬರೂ ಅಶ್ವಿನೀ ಕುಮಾರರಂತೆ ಜನಿಸಿದಿರಿ. ಆ ವೇಳೆಗೆ ಸಾಕಷ್ಟು ಲೋಕಾನುಭವ ಪಡೆದಿದ್ದ ನಾನೂ, ನಿಮ್ಮಮ್ಮನೂ ಶಿವದಾಸರಲ್ಲಿಗೆ ಹೋಗಿ, ಅವರನ್ನು ಬೇಡಿ ಅವರ ಅನುಜ್ಞೆಯಂತೆ ಮತ್ತೆ ಬ್ರಹ್ಮಚರ್ಯಾಶ್ರಮವನ್ನೇ ಹಿಡಿದು ಇದುವರೆಗೂ ನಡೆಸಿಕೊಂಡು ಬಂದಿದ್ದೇವೆ. ಈಗ ನನಗೆ ಐವತ್ತಾರು ವರುಷ; ನಿಮ್ಮಮ್ಮನಿಗೆ ನಲವತ್ತೆಂಟು ವರುಷ. ಆದರೆ ನೋಡಿದವರು "ನಿಮಗೆ ನಲವತ್ತಾಯಿತೇಂತ" ನನ್ನನ್ನ "ಮೂವತ್ತಾಯಿತೇಂತ" ನಿಮ್ಮಮ್ಮನ್ನ ಕೇಳುತಾರೆ. ನಾವೇನು ಹಂದಿಗಳಹಾಗೆ ಸಂಸಾರ ಮಾಡುತಾ ಇದ್ದೇವೆಯೇ! ಕೇಳೂ ಮಗೂ! ನಮ್ಮಲ್ಲಿ ಮದುವೇಂತ ಮಾಡತಕ್ಕಂಥ ಮಂಗಳೋತ್ಸವ ಕೇವಲ ಗಂಡು ಹೆಣ್ಣುಗಳ ಮಾನಸಿಕ ಮಿಲನ—ಹರಿ ದಾಡುವ ಅವರ ಯೌವನದ ಹೃದಯಕ್ಕೆ ತಂಪೆರೆದು ಅದಕ್ಕೆ ನೆಮ್ಮದಿಯ ನೆಲೆಯನ್ನು ತೋರಿಸುವ ಒಂದು ಅತ್ಯಗತ್ಯವಾದ ಘಟ್ಟ. ಇದಾದ ಮೇಲೆ ಉಭಯತ್ರರೂ ಒಬ್ಬರನ್ನೊಬ್ಬರು ಚೆನ್ನಾಗಿ ಅರಿಯಲು, ತಾಯಿ ತಂದೆ ನೆಂಟರಿಷ್ಟರ ಮಧ್ಯೆ ಆಟವಾಗಿ ಪ್ರಾರಂಭವಾದ ಇವರಿಬ್ಬರ ಪರಿಚಯವು ಬರುಬರುತ್ತಾ ಗಾಢವಾಗುತ್ತಾ ಬಂದು, ಪರಿಚಯವು ಗಾಢವಾದಂತೆಲ್ಲಾ ಪ್ರೇಮವು—ನಿರ್ಮಲ ಪ್ರೇಮವೂ ಮಾಗುತ್ತಾಬಂದು, ಸಕಲ ಸನ್ನಿವೇಶ ಗಳೂ ಯೋಗ್ಯವಾಗಿ ಕಂಡುಬಂದಂದು ದೈಹಿಕ ವಿವಾಹದಲ್ಲಿ ಬೆರೆಯುವುದು. ಈ ಘಟ್ಟವಾಗಲೀ, ಅಥವ ಮುಂದೆ ಆಗುವ ಮಕ್ಕಳು ಮರಿಗಳ ಗೂಡು ಗುಂಪಾಗಲಿ ಗಂಡಹೆಂಡಿರಾದ ನಿಮ್ಮ ಮನೋದೇಹದಾರ್ಢ್ಯವನ್ನವಲಂಭಿ ಸಿದುದು. ಅದಕ್ಕಾಗಿ ಯಾರನ್ನೂ ದೂರುವಂತಿಲ್ಲ. ಕೇಳು ಮಗೂ! ಈಗ ನೀನು ಇಲ್ಲದ ಕಲ್ಪನೆಯ ಕಷ್ಟಕಾರ್ಪಣ್ಯದ ಚಿತ್ರವಿಚಿತ್ರಗಳನ್ನು ಮನಸ್ಸಿಗೆ ತಂದುಕೊಳ್ಳದೆ, ಈಗ ಬಂದಿರುವ ಹೆಣ್ಣುಗಳಲ್ಲಿ ಯಾವುದನ್ನಾದರೂ ಒಪ್ಪು ವಂತಿದ್ದರೆ ಸರಿ ಇಲ್ಲಾ ಮತ್ತೆ ಬೇರೆ ಯಾವುದಾದರೂ ಹೆಣ್ಣನ್ನು ನೋಡೋಣ. ಅಂತೂ ನಮ್ಮ ದೇಶಾಚಾರ, ವಂಶಾಚಾರಕ್ಕೆ ಲೋಪಬರ ದಂತೆ ನಿನ್ನ ಮತ್ತು ಅಶೋಕನ ಮದುವೆಗಳೆರಡೂ ಈ ವರುಷದಲ್ಲಿ ನೆರವೇರ ಬೇಕೆಂದು ನನ್ನ ಮತ್ತೂ ನಿಮ್ಮಮ್ಮನ ಆಶೆ.

**ಅರವಿಂದ:** ನೀವು ಹೇಳುವುದೆಲ್ಲಾ ಬರೀ ಐಡಿಯಲ್ಲಾಯಿತಪ್ಪಾ!

ಆದರೆ ನಮ್ಮ ಕಣ್ಮುಂದೆ ನಡೆಯುತ್ತಿರುವುದೇ ಬೇರೆ.

**ವಸಂತರಾಯ:** ಅದಕ್ಕೆ ಜವಾಬ್ದಾರರು ಯಾರೂ? ನಾವೇ ತಾನೇ!

**ಅರವಿಂದ:** ಅಲ್ಲಪ್ಪ! ನೀನೇನೂ ಯಾವುದೋ ಕೆಲವು ನಿಯಮಗಳಂತೆ ಜೀವನವನ್ನ ನಡೆಸಿಕೊಂಡಿರುವಿರಿ. ಆದುದರಿಂದ ಸಾಮಾನ್ಯವಾಗಿ ಹೀಗೆ ಎಳೆಯದಾಗಿಯೇ ಮುನ್ನುಗ್ಗಿದ ಕುಟುಂಬದ ಕಾರ್ಪಣ್ಯಕ್ಕೆ ಸಿಕ್ಕಿಲ್ಲ. ಆದರೆ ನಿಮ್ಮಂತೆ ಎಲ್ಲರೂ ನಿಯಮದಿಂದಿರುವರೆಂದೇನು ನಂಬಿಕೇ?

**ವಸಂತರಾಯ:** ಸಂಸಾರದಲ್ಲೇ ನೇಮವನ್ನನುಸರಿಸದವರು, ಮಹಾಪ್ರಬಲನಾದ ವ್ಯವಹಾರದ ಸುಳಿಯಲ್ಲಿ, ಮನಮೋಹಕವಾದ, ಭ್ರಮಾತ್ಮಕವಾದ ಹೊರಜಗತ್ತಿನಲ್ಲಿ ನಿಯಮದಿಂದಿರಲು ಸಾಧ್ಯವೇ!.. ಅಲ್ಲದೇ ಅರವಿಂದ! ನಮಗೆ ವಿಶಾಲವಾದ ದೇಶದ ಎಲ್ಲ ಜನರ, ಅಥವ ಪ್ರಪಂಚದ ಸಮಸ್ತರ ಕಷ್ಟನಿಷ್ಠೂರಗಳು ಬೇಡ; ಏಕೆಂದರೆ ನಾವಾದರೂ ಯಾರಯಾವ ಪರಿಸ್ಥಿತಿಯನ್ನು ಬದಲಾಯಿಸಲು ಅಶಕ್ಯರು. ಆದರೆ ನಮ್ಮ ಮಟ್ಟಿಗೆ, ನಮ್ಮ ಕುಟುಂಬದಮಟ್ಟಿಗೆ ನಮ್ಮ ಪ್ರಭಾವಳಿಯ ಒಳಗಾದ ನೆಂಟರಿಷ್ಟರಲ್ಲಿ ಮಟ್ಟಿಗೇ ನೇಮದಿಂದ ಬಾಳಿದರೆ ಸಾಕು. ಒಂದೊಂದು ನಕ್ಷತ್ರವೂ ತನ್ನನ್ನ ಚಂದ್ರನೊಂದಿಗಾಗಲೀ, ಸೂರ್ಯನೊಂದಿಗಾಗಲೀ ಹೋಲಿಸಿಕೊಳ್ಳದೆ, ತನ್ನಿಂದ ಯಾವ ಪ್ರಪಂಚಕ್ಕೆ ಬೆಳಕಾದೀತೆಂದು ಸಂಕೋಚ ಪಡದೆ, ತನ್ನ ಮಟ್ಟಿಗೆ ತಾನು ಸ್ವಯಂಪ್ರಕಾಶಿಯಾಗಿ ಜ್ಞಾನದೃಷ್ಟಿಯಿಂದ ಬೆಳಗುತ್ತಿರುವಹೊತ್ತಿಗೆ ರಾತ್ರಿಯವೇಳೆ ಹಾದಿ ಕಾಣುವಷ್ಟಾದರೂ ಬೆಳಕು ಈ ಜಗತ್ತಿಗೆ ಸಿಗುತ್ತೆ ಅಲ್ಲವೇ?

**ಅರವಿಂದ:** ಅಪ್ಪಾ! ನೀವು ಹಿರಿಯರು, ನಾನು ನಿಮ್ಮಷ್ಟೇ ಮಾತನಾಡಲಾರೆ. ಆದರೆ ನಾನು ನಲವತ್ತನೆಯ ವಯಸ್ಸಿನ ವರೆಗೂ ಮದುವೆಯಾಗಬಾರದೂಂತಿದೇನೆ, ಅಲ್ಲದೇ ನಾನು ಮದುವೆಯಾಗೋ ಹೆಂಡತಿ ನನ್ನಷ್ಟೇ ವಿದ್ಯಾವತಿಯಾಗಿರಬೇಕಲ್ಲದೆ, ನನ್ನಷ್ಟೇ ಪ್ರಪಂಚಜ್ಞಾನವುಳ್ಳವಳಾಗಿ, ನನ್ನ ಅಭಿರುಚಿ, ವಿಚಾರ, ಅಭಿಪ್ರಾಯಗಳನ್ನೇ ಹೊಂದಿದವಳಾಗಿ, ಹೆಚ್ಚು ಕಡಿಮೆ ಸಮವಯಸ್ಕಳಾಗಿರಬೇಕು. ಊಟ, ಉಪಚಾರ, ಉಡುಪು, ಶೃಂಗಾರ, ಆಚಾರ ವ್ಯವಹಾರ ಸಮಸ್ತದಲ್ಲೂ ನಮ್ಮಿಬ್ಬರಲ್ಲಿ ಯಾವ ಭಿನ್ನ

ಭಾವನೆಯೂ ಇರಕೂಡದು. ಹಾಗೆ ಸರಿಸಮಾನವಾಗಿ ನನ್ನೊಂದಿಗೆ ಬೆರೆಯ್ಯ ಬಲ್ಲವಳೇ ನನ್ನ ಅರ್ಧಾಂಗಿಯಾಗಬಲ್ಲಳು; ಇದೆಲ್ಲಾ ಇನ್ನೂ ಹದಿನಾರು ವರು ಷದ ಮುುಂದಿನ ಯೋಚನೆ. ಈಗ ಸದ್ಯಕ್ಕಂತೂ ನಾನು ಇನ್ನೂ ಹುಡುಗ."

**ವಸಂತರಾಯ:** ಅರವಿಂದ! ನೀನೊಂದು ಕಲ್ಪನಾ ಪ್ರಪಂಚದಲ್ಲಿದ್ದೀಯೆ. ನನ್ನ ಅನುಭವದ ಮಾತಾಗಲೀ, ಶ್ರೀ ಶಿವದಾಸರಂಥ ಜ್ಞಾನಿಗಳು ನುಡಿಯಾಗಲೀ ನಿನ್ನ ಮನಸ್ಸಿನ ಮೇಲೆ ಪರಿಣಾಮಕಾರಿಯಾಗನೇ ಹೋಗಿರುವುದು ನನಗಂತೂ ದುಃಖದ ವಿಚಾರ. ನೀನು ಮದುವೆಯಾಗುವುದು ಕೇವಲ ನಿನ್ನೊಬ್ಬನ ಸುಖಕ್ಕೇನೇ, ಇದರಲ್ಲಿ ತಂದೆ ತಾಯಿಗಳ ಯಾವ ಬಾಧ್ಯತೆಯೂ ಇಲ್ಲವೆಂಬ ಸಿದ್ಧಾಂತ ಕೇವಲ ಸ್ವಾರ್ಥಪರವಾದದ್ದು. ಇನ್ನೂ ಎಂಟು ದಿವಸಗಳು ಯೋಚಿಸಿ ನೋಡು. ನಿನ್ನಹಿತೈಷಿಗಳಾದ ಮಿತ್ರರ ಸಲಹೆಯನ್ನು ಕೇಳು, ಎಲ್ಲಕ್ಕಿಂತ ಹೆಚ್ಚಾಗಿ ನಿನ್ನನ್ನೇ ಹೆತ್ತು ಹೊತ್ತುಸಾಕಿದ ನಿಮ್ಮಮ್ಮನ ಸಂಗಡ ಒಂದು ಸಲವಾದರೂ ವಿಚಾರಮಾಡಿ ನೋಡು......... ಅಶೋಕನ ಮದುವೆಯಂತೂ ಮುಂದಿನ ತಿಂಗಳಲ್ಲಿ ನಡೆದೇ ನಡೆಯುವುದು. ನೀನೂ ವಂಶಾಚಾರದಂತೆ ಅವನ ಜೊತೆಯಲ್ಲಿ ನಿನಗೆ ಬೇಕಾದ ಹೆಣ್ಣನ್ನು ಮದುವೆಯಾವರೆ ಸಂತೋಷ.

ಇಷ್ಟು ಹೇಳಿ ವಸಂತ ರಾಯನು ರೂಮಿನಿಂದ ಹೊರಕ್ಕೆಬಂದು ಬಿಟ್ಟನು.

ತಂದೆಯು ಅಸಂತೋಷದಿಂದ ಹೋದನೆಂದು ಅರವಿಂದನಿಗೆ ಅರಿವಾಗದೇ ಹೋಗಲಿಲ್ಲ. ಅಲ್ಲದೆ ತನ್ನಸಿದ್ಧಾಂತ ಸಂಕಲ್ಪಗಳನ್ನುಕೇಳಿ ತಾಯಿಯೂ ಸಹ ಬಹಳ ನೋಯುವಳೆಂದೂ ಅನ್ನಿಸಿತು. ಆದರೆ ಪ್ರಪಂಚವನ್ನರಿಯದ ಹೆಂಗಸಾದ ತಾಯಿಯು ಕಣ್ಣೀರಿಗಾಗಲೀ ವಂಶಾಚಾರವೆಂದು ಅಂಧ ಶ್ರದ್ಧೆಯಿಂದ ಕೂಡಿದ ತಂದೆಯ ಸಿಟ್ಟಿಗಾಗಲೀ ಹೆದರಿ, ತಾನು ವರ್ಷಾನುಗಟ್ಟಲೆಯಿಂದ ಹೃದಯಾಂತರಾಳದಲ್ಲಿ ಸಾಕಿಕೊಂಡಿರುವ ತನ್ನ ಭವಿಷ್ಯದ ರೂಪುರೇಖೆಗಳನ್ನು ಬದಲಾಯಿಸಲು ಸಾಧ್ಯವೇ ? ಎಂದಿಗೂ ಇಲ್ಲ, ಅಶೋಕ್‌ನ ವಿಚಾರ ಬೇರೆ. ಮನೆಯ ಹೊರಗಿರುವುದೇನೆಂದು ತಿಳಿಯದೇ, ಮನೆಯ ಮುಂದಿನ ಕಾಲೇಜಿನಲ್ಲೇ ವಿದ್ಯಾಭ್ಯಾಸವನ್ನೆಲ್ಲಾ ಮುಗಿಸಿ, ಪುರುಷಾರ್ಥ

ಸಾಧನೆಯಾಯಿತೆಂದು ತಿಳಿದು ಕೂತಿರುವ ಅವನೆಲ್ಲಿ! ಮದ್ರಾಸು, ಪೂನಾ, ಬೊಂಬಾಯಿಗಳ ಕಾಲೇಜುಗಳನ್ನೇ ಅಲ್ಲದೆ ಕೋರ್ಟು ಕಛೇರಿಗಳು, ಲಾಯರು ವಕೀಲರು, ಜಡ್ಜಿ ಜನರಲ್ಲೆಲ್ಲಾ ಓಡಾಡಿ, ಸಮಸ್ತ 'ಧರ್ಮ' ಶಾಸ್ತ್ರ, ಕಾನೂನು ಕಾಯಿದೆಗಳನ್ನೆಲ್ಲಾ ಓದಿ ಬಂದಿರುವ ತಾನೆಲ್ಲೀ! ಎಂದು ಕೊಂಡು ಸಮಾಧಾನ ಮಾಡಿಕೊಂಡನು.

ಅಂತೂ ಒಂದು ವಾರದೊಳಗೇ ಹಾಲಿನಂಥ ಕುಟುಂಬದಲ್ಲಿ ಒಂದು ಬಗೆಯಾದ ಒಡಕು ಕಾಣಿಸಿಕೊಂಡಿತು. ಅಶೋಕನ ಮದುವೆಯ ಸಿದ್ಧತೆಗಳಾಗಲು ಪ್ರಾರಂಭವಾದ ಮೇಲಂತೂ ಅರವಿಂದನಿಗೆ ತಾನು ಮನೆಯಿಂದ ಹೊರಗಾದೆನೆಂದೇ ಅನ್ನಿಸಿತು. ಆದರೆ ಕಮಲಮ್ಮನು ಅವನ ವಿಚಾರದಲ್ಲಿ ಎಂದಿಗಿಂತ ಹೆಚ್ಚಿನ ವಾತ್ಸಲ್ಯವುಳ್ಳವಳಾಗಿ, ಯಾವ ವಿಚಾರದಲ್ಲಿ ಏನ್ನ ವ್ಯತ್ಯಾಸವಾದರೂ ಅರವಿಂದನೆಲ್ಲಿ ನೊಂದುಕೊಂಡಾನೋ ಎಂದು ಇನ್ನೂ ಹೆಚ್ಚು ಎಚ್ಚರಿಕೆಯಿಂದ ವ್ಯವಹರಿಸತೊಡಗಿದಳು. ತನಗೇ ಅರಿವಿಲ್ಲದೆ ಅರವಿಂದನ ಊಟ ಉಪಚಾರಗಳ ವಿಚಾರದಲ್ಲಿ ಮಗನನ್ನು ಕಾಣುವ ಸಹಜ ಸಲಿಗೆಗೆ ಬದಲಾಗಿ ಹೊಸ ಅಳಿಯನಿಗೆ ಮಾಡುವ ಬಹು ಎಚ್ಚರದ ಭಯ ಭಕ್ತಿಯ ಬಣ್ಣ ಬಂದುಬಿಟ್ಟಿತು. 'ತನ್ನ ಕಣ್ಣೀರಿಗೂ ಬಗ್ಗದೆ ಅರವಿಂದನು ತನ್ನ ಹಟವನ್ನು ಸಾಧಿಸುತ್ತಿರುವುದಕ್ಕಾಗಿ ತಾನು ನೊಂದುಕೊಂಡಳೆಂದು ಅವನು ತಿಳಿಯದಿರಲಿ' ಎಂಬಾಶೆಯಿಂದ ಕಮಲಮ್ಮನು ಅವನ ಬೇಕು ಬೇಡಗಳನ್ನು ವಿಚಾರಿಸಿಕೊಳುತ್ತಿದ್ದಳು. ಆದರೆ ವಸಂತರಾಯನು ಮಾತ್ರ 'ಗುರುವು ಕೊಟ್ಟಿರುವ ಇಬ್ಬರು ಪುತ್ರರಲ್ಲಿ ಒಬ್ಬನಾದರೂ ತಮ್ಮ ಮಾತಿಗೆ ಮರ್‍ಯಾದೆ ಕೊಟ್ಟನಲ್ಲಾ' ಎಂಬೊಂದು ಸಂತೋಷದಲ್ಲಿ ಎಂದಿನಂತೆ ಸಮಾಧಾನವಾಗಿಯೇ ಇದ್ದನು. ಆದರೆ ಕಮಲಮ್ಮನ ಹೃದಯಾಂತರಾಳದಲ್ಲಿ ಒಂದು ಹೇಳಲಾರದ ಮೂಗುಕೊರಗು ಮನೆಮಾಡಿತು.

೩

ಒಂದು ತಿಂಗಳು ಕಳೆದಿತ್ತು. ಅಶೋಕ ಅನ್ನಪೂರ್ಣೆಯರ ವಿವಾಹವು ಸಾಕಷ್ಟು ವೈಭವದಿಂದಲೇ ನಡೆಯಿತು. ನಗರದ ಪ್ರಮುಖ ವರ್ತ- ಕರೂ, ಅಧಿಕಾರಿ ವರ್ಗದವರೂ, ಕಾಲೇಜು ಹೈಸ್ಕೂಲುಗಳ ಅಧ್ಯಾಪ-

ವರ್ಗದವರೂ ನೂರಾರು ಜನರು ಬಂದು ವಿವಾಹ ಮಂಟಪದಲ್ಲಿ ಕಿಕ್ಕಿರಿದು ತುಂಬಿದ್ದರು. ಜೊತೆಗೆ ಕಮಲಮ್ಮನ ಅಣ್ಣ ತಮ್ಮಂದಿರು ಅವರ ಕುಟುಂಬ ದವರ ಹತ್ತಾರು ಜನರು ಎಂಟು ದಿವಸ ಮುಂಚಿತವಾಗಿಯೇ ಬಂದು ಊಟ ಉಪಚಾರಗಳಲ್ಲಿ ಭಾಗವಹಿಸಿದ್ದರು. ಭುಜಂಗರಾಯನು ಜನಪ್ರಿಯನಾಗಿ ದ್ದರೂ ಧನಪ್ರಿಯನಾಗಿರಲಿಲ್ಲವಾದಕಾರಣ, ಮದುವೆಯ ಎರಡು ಖರ್ಚನ್ನೂ ವಸಂತರಾಯನು ತಾನೇ ವಹಿಸಿಕೊಂಡು ತಮ್ಮ ಮನೆಯಲ್ಲೇ ಅಧ್ದೂರ್ಯ ವಾಗಿ ವಿವಾಹೋತ್ಸವವನ್ನು ನಡೆಸಿಬಿಟ್ಟನು. ಕಮಲಮ್ಮನು ತನ್ನ ತೌರು ಮನೆಯಿಂದ ತನಗೆ ಬಂದಿದ್ದ ಸಸಹಸ್ರಾರು ರೂಪಾಯಿನ ಆಭರಣಗಳೆಲ್ಲ ವನ್ನೂ ಅನ್ನಪೂರ್ಣೆಗೆ ಹಾಕಿಬಿಟ್ಟಳು. ವಸಂತರಾಯನು ಆಕೆಯನ್ನು ಒಳಕ್ಕೆ ಕರೆದು "ಇದೇನು ಕೆಲಸಮಾಡುತ್ತಿದ್ದೀ? ನಿನ್ನ ಆಭರಗಳೆಲ್ಲವನ್ನು ತೆಗೆದು ಆ ಹುಡುಗಿಗೇಕೆ ಹೇರಿದೆ? ಅಷ್ಟು ನಿನಗಿಷ್ಟವಾಗಿದ್ದಪಕ್ಷದಲ್ಲಿ ಹೊಸದಾಗಿ ಮಾಡಿಸಬಹುದಾಗಿದ್ದೀತಲ್ಲಾ?" ಎಂದು ಕೇಳಿದಾಗೂ ಅವಳು" ಇನ್ನೀ ಆಭರಣಗಳನ್ನು ಯಾರಿಗೋಸ್ಕರ ನಾನು ಹೊತ್ತಿರಬೇಕು? ಮನೆಗೆ ಬರ ಬೇಕಾದ ಒಬ್ಬಳು ಸೊಸೆ ಬಂದಳು. ಇರುವ ಆಭರಣಗಳೆಲ್ಲವೂ ಅವಳವೇ?" ಎಂದುಬಿಟ್ಟಳು ಸ್ವಲ್ಪ ಚಕಿತನಾದ ವಸಂತರಾಯನು "ಅಲ್ಲಾ ಕಮಲಾ? ನೀನ್ನ ತೌರುಮನೆಯ ಒಡವೆ ನಿನಗಷ್ಟು ಭಾರವಾಗಿದ್ದರೆ, ಅವನ್ನು ಇಬ್ಬರು ಸೊಸೆಯರಿಗೂ ಹಂಚಬೇಡವೇ? ಇಂದಲ್ಲ ನಾಳೆ ಅರವಿಂದ ಮದುವೆಯಾಗು ವುದಿಲ್ಲವೇ?" ಎಂದು ಪ್ರಶ್ನಿಸಿದುದಕ್ಕೆ "ಅರವಿಂದನು ಮದುವೆಯಾಗಿ ಆ ಸೊಸೆಯನ್ನು ನೋಡುವ ಭಾಗ್ಯ ನನಗಿಲ್ಲಾ;" ಎಂದು ಕಂಬನಿದುಂಬಿ ಹೊರಟುಹೋದಳು. ವಸಂತರಾಯನು ಹೆಂಡತಿಯ ಕಣ್ಣುಗಳು ನೀರು ತುಂಬಿದುದನ್ನು ತನ್ನ ಜೀವಮಾನದಲ್ಲೆಲ್ಲಾ ಇದೇ ಮೂರನೆಯಬಾರಿ ನೋಡಿದುದು. ಮೊದಲು ಅವಳ ತಾಯಿ ಸತ್ತಳೆಂದು ಕಂಡು ಬಂದುದು; ಅದೂ ಹತ್ತಾರು ವರುಷಗಳ ಕೆಳಗೆ. ಎರಡನೆಯದು ವಸಂತರಾಯನಿಗೆ ಒಮ್ಮೆ ಬಿಸಲಿನ ತಾಪಕ್ಕೆ ಎಚ್ಚರ ತಪ್ಪಿಹೋಗಿದ್ದಂದು; ಅದೂ ಏಳೆಂಟು ವರುಷಗಳ ಹಿಂದಿನ ಮಾತು. ಈಗ ಮೂರನೆಯ ಬಾರಿ. ವಸಂತರಾಯನ ಕರುಳು "ಚುರ್" ಎಂದಿತು. ಮಗನ ವಿಚಾರವಾಗಿ ಹೆಂಡತಿಯು ಕೊರಗು ತ್ತಿರುವಳೆಂದು ಸ್ಪಷ್ಟವಾಗಿಹೋಯಿತು. ಮಾಡುವುದೇನು?

ಅಂತೂ ಮದುವೆಯ ಉತ್ಸವಾದಿಗಳೆಲ್ಲವೂ ಮುಗಿದು ನೆರೆದಿದ್ದ ನೆಂಟರಿಷ್ಟರೆಲ್ಲರೂ ಅವರವರ ಮನೆಗಳಿಗೆ, ಊರುಗಳಿಗೆ ಹೊರಟುಹೋದ ಮೇಲೆ ಮನೆಯಲ್ಲಿ ಕೆಲವು ಅನಿರೀಕ್ಷಿತ ಬದಲಾವಣೆಗಳಾಗತೊಡಗಿದುವು. ಕೆಳಗಡೆಯ ಅಂತಸ್ಥಿನಲ್ಲೇ ಬಲಗಡೆಯ ರೂಮಿನಲ್ಲಿ ಅರವಿಂದನೂ, ಎಡಗಡೆಯ ರೂಮಿನಲ್ಲಿ ಅಶೋಕನೂ ಸುಮಾರು ಹನ್ನೆರಡು ವರುಷಗಳಿಂದ ತಮ್ಮ ತಮ್ಮ ಓದುಬರಹಗಳನ್ನು ಸಾಗಿಸುತ್ತಾ ಒಗ್ಗಿಸಿಕೊಂಡುಬಿಟ್ಟಿದ್ದರು. ಅರವಿಂದನು 'ಲಾ' ಪರೀಕ್ಷೆಗಾಗಿ ಬೊಂಬಾಯಿ ಪೂನಾಗಳಿಗೆ ಹೋಗಿದ್ದಾಗ ಕೂಡ, ಅವನ ಕೋಣೆಯು ಅವನಿಗಾಗಿ ಮುಡಿಪಾಗಿದ್ದಿತೇ ಹೊರತು ಬೇರೆ ಯಾರೂ ಅಲ್ಲಿಗೆ ಕಾಲಿಡುತ್ತಿರಲಿಲ್ಲ. ಆದರೆ ಈ ಮದುವೆಯಾದ ನಂತರ ಅರವಿಂದನು ಮಹಡಿಯ ಮೇಲಿನ ಎರಡು ರೂಮುಗಳನ್ನೂ, ಬೀಗರಿದ್ದು ಹೋಗಿದ್ದ ಹಾಲನ್ನೂ ಆಳುಗಳಿಂದ ತೊಳಸಿಬಳಿಸಿ, ತನ್ನ ಕುರ್ಚಿ, ಮೇಜುಗಳನ್ನು ಹಾಲಿಗೂ, ತನ್ನ ಮಂಚವನ್ನು ಒಂದು ರೂಮಿಗೂ, ತನ್ನ ಪುಸ್ತಕ ಗಡಿಯಾರಗಳೇ ಮೊದಲಾದುವನ್ನೂ ಇನ್ನೊಂದು ಕೋಣೆಗೂ ಸಾಗಿಸಿ, ಹಾಲಿನ ಮುಂದೆ ಹೊರಗಡೆಯ ರಸ್ತೆಗೆ ಕಾಣುವಂತೆ "ಬಿ. ವಿ. ಅರವಿಂದ್, ಬಿ.ಎ. ಬಿ.ಎಲ್. ಅಡ್ವೋಕೇಟ್" ಎಂದು ಬೋರ್ಡು ಹಾಕಿಬಿಟ್ಟ. ಅಲ್ಲದೆ ಹಾಲಿನ ಬಾಗಿಲುವಾಡದ ಮೇಲೆ 'ಅಪ್ಪಣೆ ಇಲ್ಲದೆ ಒಳಗೆ ಪ್ರವೇಶವಿಲ್ಲ' ಎಂಬ ಬೋರ್ಡನ್ನು ಬಡಿಸಿಬಿಟ್ಟ. ಕೇವಲ ಸ್ನಾನ ಊಟಗಳಿಗೆ ಮಾತ್ರ ಕೆಳಗಡೆಗೆ ಬರುತ್ತಿದ್ದನೇ ಹೊರತು, ಮಿಕ್ಕ ಸಮಯದಲ್ಲೆಲ್ಲಾ ಮಹಡಿಯ ಮೇಲೆಯೇ ಇರುತ್ತಿದ್ದ; ಕಾಫಿ ತಿಂಡಿಯೂ ಮಹಡಿಯ ಮೇಲಕ್ಕೇ ಬರಬೇಕೆಂದು ಅಡುಗೆಯವನಿಗೆ ಅಪ್ಪಣೆ ಮಾಡಿಬಿಟ್ಟ

ಇದುವರೆವಿಗೂ ಅಶೋಕನೊಂದಿಗೆ, ಮತ್ತು ಆಗಾಗ ತಾಯಿ ತಂದೆಗಳೊಂದಿಗೆ ಸಂಜೆಯ ವೇಳೆ ತಿರುಗಾಡಲು ಹೋಗುತ್ತಿದ್ದವನು ಈಗ ಪೂರ್ಣವಾಗಿ ನಿಲ್ಲಿಸಿಬಿಟ್ಟು, ಇನ್ಸ್ಟಿಟ್ಯೂಟ್‌ಗೆ ಸದಸ್ಯನಾಗಿಬಿಟ್ಟು ಸಂಜೆಯೆಲ್ಲಾ ಅಲ್ಲೇ ಇತರ ಲಾಯರುಗಳು ಗೆಳೆಯರುಗಳೊಂದಿಗೆ ಇಸ್ಪೀಟು, ಹರಟೆ, ಇತ್ಯಾದಿಗಳಲ್ಲಿ ಕಳೆಯತೊಡಗಿದ.

ವಸಂತರಾಯನೇನೋ ಅರವಿಂದನ ಈ ನಡವಳಿಕೆಯಿಂದ ಅಲ್ಪಸ್ವಲ್ಪ ಬೇಜಾರುಗೊಂಡರೂ ಅಷ್ಟು ಮನಸ್ಸಿಗೆ ಹಚ್ಚಿಸಿಕೊಳ್ಳಲಿಲ್ಲ; ಆದರೆ

ಕಮಲಮ್ಮನ ಹೃದಯವು ಬಹುವಾಗಿ ಕಲಕಿಹೋಯಿತು. ತಾವು ಎಷ್ಟು ಎಚ್ಚರಿಕೆಯಿಂದ ನಡೆದುಕೊಳ್ಳುತ್ತಿದ್ದರೂ, ಮಗನು ದೂರವಾಗುತ್ತಿರುವನೆಂದೆನಿಸಿ ಬಹು ದುಃಖವಾಯಿತು. ಕಮಲಮ್ಮನಿಗೆ ಅದೇಕೋ ಅರವಿಂದನ ಮೇಲೆಯೇ ಹೆಚ್ಚು ಪ್ರೇಮ ; ಅದೇಕೋ ತಿಳಿಯದು. ಬಹುಶಃ ಅವನು ಹೆಚ್ಚು ವಸಂತರಾಯನನ್ನು ಹೋಲುತ್ತಿದ್ದುದರಿಂದಲೋ ಏನೋ. ಈ ಪ್ರೇಮದ ಕಾರಣ, ಆಕೆಗೆ ಈಗ ದುಃಖವೂ ಹೆಚ್ಚಾಯಿತು.

ಒಂದು ದಿನ ಬೆಳಿಗ್ಗೆ ತಾನೇ ಕಾಫಿ ತಿಂಡಿಯನ್ನು ತೆಗೆದುಕೊಂಡು ಮಹಡಿಯ ಮೇಲಕ್ಕೆ ಹೋದಳು. ಅರವಿಂದನು ಸ್ನಾನ ಮಾಡಿ, ಹಾಲಿನ ಗೋಡೆಗೆ ಹಾಕಿದ್ದ ದೊಡ್ಡ ಕನ್ನಡಿಯಲ್ಲಿ ನೋಡಿಕೊಂಡು ತನ್ನ ತಲೆಯನ್ನು ಬಾಚಿಕೊಳ್ಳುತ್ತಿದ್ದ. ಮೆಟ್ಟಲು ಹತ್ತುವ ಸದ್ದು ಕೇಳಿ ಅಡುಗೆಯವನು ಬಂದನೆಂದಿದ್ದ ; ಆದರೆ ಕನ್ನಡಿಯಲ್ಲಿ ತನ್ನ ತಾಯಿಯ ಮುಖವನ್ನು ನೋಡಿ ಬೆಚ್ಚಿದ. ತಟ್ಟನೆ ಹಿಂದಿರುಗಿ ಹೊರಕ್ಕೆ ಬಂದು "ಅಮ್ಮಾ! ನೀನೇಕಮ್ಮ ಇಷ್ಟು ದೂರ ಬಂದೇ ?" ಎಂದ. ಕಮಲಮ್ಮನು ಕತ್ತೆತ್ತಿ ಅವನ ಮುಖವನ್ನೇ ನೋಡುತ್ತಾ "ನಾನು ಬರಬಾರದೇ ಮಗು ?" ಎಂದರು. ಅರವಿಂದನು ತಟ್ಟನೆ "ಹಾಗಲ್ಲಮ್ಮ ! ಈ ಕಾಫಿ ತಿಂಡಿಯನ್ನು ಅಡುಗೆಯವನ ಕೈಲಿ ಕಳುಹಿಸಬಾರದಾಗಿತ್ತೇ !" ಎಂದ. ಕಮಲಮ್ಮನು ಒಳಕ್ಕೆ ಪ್ರವೇಶಿಸುವ ಮುಂಚೆ, ಬಾಗಿಲುವಾಡದ ಬೋರ್ಡನ್ನು ನೋಡಿ ಓದಿದಳು. ಅರವಿಂದನು "ಅದು ಹೊರಗಿನವರಿಗಮ್ಮ!" ಎಂದು ತಾಯಿಯನ್ನು ಒಳಕ್ಕೆ ಕರೆದೊಯ್ದ.

ಕಮಲಮ್ಮನು ತಿಂಡಿ ಕಾಫಿಯನ್ನು ಮೇಜಿನ ಮೇಲಿಟ್ಟು ತಾನು ಒಂದು ಕುರ್ಚಿಯಲ್ಲಿ ಕೂತಳು. ಅರವಿಂದನೂ ಆಕೆಯ ಎದುರು ಕುರ್ಚಿಯಲ್ಲಿ ಕೂತ. "ತಗೋ ಮಗು ತಿನ್ನು" ಎಂದು ಕಮಲಮ್ಮನು ತಿಂಡಿಯ ತಟ್ಟೆಯನ್ನು ಅವನ ಕಡೆಗಿಟ್ಟಳು. ಅರವಿಂದನು ಎಳೆಯ ಮಗುವಿನಂತೆ ತಾಯಿಯ ಮುಖವನ್ನೇ ನೋಡುತ್ತಾ ತಿನ್ನ ತೊಡಗಿದ. ಸದಾ ಚಿರಮಂದಹಾಸದಿಂದ ತುಂಬಿ, ಸಂತೋಷದಿಂದ ತುಂಬಿಕೊಂಡಿದ್ದ ತಾಯಿಯ ಮುಖವು ಈಗ ಬತ್ತುತ್ತಾ, ಇದ್ದಕ್ಕಿದ್ದಂತೆಯೇ ವೃದ್ಧಾಪ್ಯದ ಚಿಹ್ನೆಗಳು ಅಲ್ಲಲ್ಲಿ ಮನೆ ಮಾಡುತ್ತಿರುವುದೆಂದು ಕಂಡು ನೊಂದ. ತಾನೇ ಮಾತನ್ನು ಪ್ರಾರಂಭಿಸುವುದು ಮೇಲೆಂದು ತಿಳಿದು "ಅಮ್ಮಾ! ನಿನ್ನ ಮೈಗೆ ಹುಷಾ

ಡಾಗಿಲ್ಲವೇನಮ್ಮ?" ಎಂದು ಪ್ರೀತಿಯಿಂದ ಪ್ರಶ್ನಿಸಿದ.

**ಕಮಲಮ್ಮ :** "ಮೈಗೇನು ಧಾಡಿ ಮಗೂ. ಧಡೂತಿಯಾಗಿದೆ. ಇನ್ನೂ ನಾಲ್ಕೈದು ವರುಷ ಭಯವಿಲ್ಲ.

**ಅರವಿಂದ :** ಇದು ಯಾಕಮ್ಮ ಹೀಗೆ ಮಾತನಾಡುತೀ?

**ಕಮಲಮ್ಮ :** ಹೀಗೇಂದರೆ ಹ್ಯಾಗೆ ಮಗೂ ?

**ಅರವಿಂದ :** ಮನಸ್ಸಿಗೆ ಬಹಳ ಬೇಸರವಾದಂತಿದೆ.

**ಕಮಲಮ್ಮ :** ಹೌದು ಮಗೂ.

**ಅರವಿಂದ :** ಯಾಕಮ್ಮಾ?

**ಕಮಲಮ್ಮ :** ಯಾಕೇಂತ ಹೇಳಲಿ? ನಿನ್ನನ್ನೂ ಅಶೋಕನನ್ನೂ ನನ್ನೆರಡು ಕಣ್ಣುಗಳೂಂತ ತಿಳಿದು ಸಾಕಿ ಬೆಳಸಿದೆ. ಈಗ ದೊಡ್ಡೋರಾದಿರಿ. ಸ್ವತಂತ್ರರಾದಿರಿ. ನಿಮ್ಮ ಕಷ್ಟಸುಖ ನೀವೇ ತಿಳಿಯೋರಾದಿರಿ. ಆದರೆ ಮಗೂ, ನೀನು ಬರುಬರುತಾ ನಮ್ಮಿಂದಾ ದೂರವಾಗುತಾ ಇರೋ ಹಾಗೆ ಕಾಣುತ್ತೆ. ಇದಕ್ಕೇನು ಕಾರಣ? ನನ್ನಿಂದಲಾಗಲೀ, ನಿಮ್ಮ ತಂದೆಯಿಂದ ಲಾಗಲೀ ಅಥವ ಅಶೋಕನಿಂದಲಾಗಲೀ ಏನಾದರೂ ಅಪಚಾರವಾಯಿತೇ ? ಅಪರಾಧವಾಯಿತೇ ? ಅಂತ ಕೇಳೋಣಾಂತ ಬಂದೆ ಮಗೂ.

**ಅರವಿಂದ :** ಇದೇನು ಪ್ರಶ್ನೇನಮ್ಮಾ! ನಾನೇನು ಹೊರಗಿನವನೇ ? ಇಲ್ಲ ಈ ಮನೆಯ ಆಳಿಯನೋ ?-ನನಗೆ ನೀವು ಅಪಚಾರ ಮಾಡೋದಕ್ಕೆ;

**ಕಮಲಮ್ಮ :** ಹಾಗಾದರೆ ಆ ಹುಡುಗನ ಮದುವೆಯಾದ ಮೇಲೆ ಮನೇಲಿಷ್ಟೊಂದು ವಿಪರೀತದ ಬದಲಾವಣೆಗಳೇ ಮಗೂ?

**ಅರವಿಂದ :** ಏನು ಬದಲಾವಣೆಗಳಮ್ಮಾ?

**ಕಮಲಮ್ಮ :** ಹೊತ್ತಿಗೆ ಸರಿಯಾಗಿ ಬಂದು ಎಲ್ಲರ ಸಂಗಡ ಕೂತು; ಸರಸವಾಗಿ ಮಾತುಕತೆ ಆಡಿಕೊಂಡು ತಿಂಡಿಗಿಂಡಿ ತಿಂದುಕೊಂಡು ಇದ್ದದ್ದೆಲ್ಲಾ ಕನಸಾಗಿ ಹೋಯಿತೇ? ದಿನಾ ಸಂಜೆ ಅಶೋಕನನ್ನೂ ಬಿಡುವಾಗಿದ್ದರೆ ನಿಮ್ಮ ತಂದೇನೂ, ನನ್ನನ್ನೂ ವಾಕಿಂಗ್ ಕರೆಕೊಂಡು ಹೋಗುತ್ತಿದ್ದುದು ಮರೆತೇಹೋಯಿತೆ. ಎಲ್ಲಾದಕ್ಕಿಂತ ಹೆಚ್ಚಾಗಿ, ಇಷ್ಟು ವರುಷವೂ ಇಲ್ಲದ್ದು ಈಗ ಮಹಡಿ ಮೇಲೆ ಒಂದು ಬೋರ್ಡು ಹಾಕಿಕೊಂಡು ಇಲ್ಲಿ ಒಬ್ಬನೇ ಇರುತೀಯಲ್ಲ ಇದು ಸರಿಯೇ ಮಗೂ? ಈ ಮಹಡಿ ಮಾತ್ರ

ನಿನ್ನದೇ ? ಈ ಮನೆಯೆಲ್ಲಾ ನಿನ್ನದಲ್ಲವೇ ? ನಾನೂ, ನಿಮ್ಮ ತಂದೆ ನಿನ್ನೋರಲ್ಲವೇ ? ಅಶೋಕ ನಿನ್ನ ಜೊತೇಲಿ ಹುಟ್ಟಿ ಬೆಳೆದೋನಲ್ಲವೇ ?

**ಅರವಿಂದ** : ಅಮ್ಮಾ ! ಪ್ರಪಂಚದಲ್ಲಿ ಸ್ಥಿತಿಗತಿಗಳು ಯಾವಾಗಲೂ ಒಂದೇ ಸಮನಾಗಿರೊಲ್ಲ. ಸದಾ ಬದಲಾಯಿಸುತ್ತಾ ಇರೋದೇ ಈ ಜಗತ್ತಿನ ಲಕ್ಷಣ. ನಮ್ಮ ಸಂಸಾರಗಳೂ ಹಾಗೆಯೇ. ನಾನು ಅಶೋಕ ಹುಡುಗರಾಗಿದ್ದೆವು. ನನಗೆ ಅವನ ಜೊತೆ ; ಅವನಿಗೆನನ್ನ ಜೊತೆ-ಇಷ್ಟೇ ನಮ್ಮ ಪ್ರಪಂಚವಾಯಿತು. ಈಗ ದೊಡ್ಡೋರಾದೆವು. ಅವನು ಒಂದು ಜಾಗ ಸೇರಿದ ; ಒಂದು ಕಸುಬಿಗೆ ತಾಳಿ ಕಟ್ಟಿದ. ನಾನು ಬೇರೇ ಕಸುಬನ್ನು ಹಿಡಿದು ಬೇರೆ ಜಾಗ ಸೇರಿದೆ. ಅವನ ಪ್ರಪಂಚ,- ಅವನ ಸ್ನೇಹಿತರು, ಅವನ ವಿಚಾರ ವಿಹಾರಗಳು ಬೇರೆಯಾದುವು. ಹಾಗೆಯೇ ನನ್ನ ಸ್ನೇಹಿತರು, ನನ್ನ ಪ್ರಪಂಚ, ನನ್ನ ವಿಚಾರ ವಿಹಾರಗಳು ಬೇರೆ ಯಾದುವು. ಅಲ್ಲದೇ ಅವನಿಗೆ ಮದುವೆಯಾದ ಮೇಲೆ ಅವನ ಮಾವ, ಭಾವ ಮೈದುನಂದಿರೂ ಇವರೆಲ್ಲ ಆಗಾಗ ಬರುತ್ತಿರುತ್ತಾರೆ. ನಾನು ಎದುರು ರೂಮನ್ನ ಬಿಟ್ಟುಕೊಡೋದು ನನ್ನ ಕರ್ತವ್ಯಾಂತ ತೀರ್ಮಾನಿಸಿ ಮಹಡಿಯ ಮೇಲಕ್ಕೆ ಬಂದುಬಿಟ್ಟೆ. ಅಲ್ಲದೆ ಮುಂದಿನ ವರುಷದಿಂದ ನಾನೇ ಸ್ವತಂತ್ರವಾಗಿ ಪ್ರಾಕ್ಟೀಸ್ ಪ್ರಾರಂಭಿಸಬೇಕಾಗುತ್ತೆ. ಆಗ ಕಕ್ಷಿಗಾರರು, ಇತರರೂ ಬರುತ್ತಿರುತ್ತಾರೆ. ಅದಕ್ಕೋಸ್ಕರ ಇಲ್ಲಿಗೆ ಬದಲಾಯಿಸಿಕೊಂಡೆ; ಇದು ತಪ್ಪೇನಮ್ಮ ?

**ಕಮಲಮ್ಮ** : ನೀನು ಇಲ್ಲಿಗೆ ಬಂದದ್ದು ತಪ್ಪೂಂದೇನೇ ಮಗೂ ? ಮನೆಯೆಲ್ಲಾ ನಿನ್ನದೇ. ನೀನೆಲ್ಲಿಬೇಕಾದರೂ ಇರು. ಆದರೆ ನಮ್ಮ ಸಂಗಡ ಪ್ರೀತಿಯಿಂದ ಬೆರೆಯೋದೇ ಕಡಿಮೆಯಾಗಿಹೋಯಿತು. ಹಿಂದಿನ ಹಾಗೆ ಕಲೆತು ಮಾತುಕಥೆ ಆಡುತ್ತಿದ್ದದ್ದೆಲ್ಲಾ ನಿಂತುಹೋಯಿತಲ್ಲಾ ಮಗೂ ? ಎಲ್ಲಾದಕ್ಕಿಂತ ಹೆಚ್ಚಾಗಿ ಅಶೋಕ ನೀನೂ ಇಬ್ಬರೂ ಒಂದೇ ಮರದ ಎರಡು ಕೊಂಬೆಗಳ ಹಾಗೆ ಬೆಳೆದೋರು ಈಗ ದೂರದೂರವಾಗುತ್ತಾ ಇದ್ದೀರಲ್ಲ, ಇದರಿಂದ ನನಗೆ ಬಹು ದುಃಖವಾಗತ್ತೆ ಮಗೂ.

**ಅರವಿಂದ** : ಅಮ್ಮಾ ! ನೀವು ನನ್ನ ಪ್ರತಿಯೊಂದು ನಡತೇನೂ ತುಂಬಾ ಅಪಾರ್ಥಮಾಡಿಕೊಂಡಿರೊ ಹಾಗೆ ಕಾಣಿಸುತ್ತೆ. ಎರಡು ಕೊಂಬೆ

ಗಳೂ ಬೆಳೀತಾ ಬೆಳೀತಾ ಎಷ್ಟು ದೂರ ದೂರವಾದರೂ ಬುಡದಿಂದ ತಪ್ಪಿಸಿಕೊಂಡು ಬೇರೆಯಾಗೋದಕ್ಕೆ ಸಾಧ್ಯವೇನಮ್ಮಾ. ಈಗ ಅವನಿಗೆ ಮದುವೆಯಾಯಿತು-ಇಂದಲ್ಲ ನಾಳೆ ಅವನ ಹೆಂಡತಿ ಮನೆಗೆ ಬರುತ್ತಾರೆ. ಅವನದೇ ಒಂದು ಪುಟ್ಟಸಂಸಾರ ಪ್ರಾರಂಭವಾಗುತ್ತೆ. ಅವನ ಆಶೋತ್ತರಗಳು, ಅವನ ಕೆಲಸ ಕಾರ್ಯಗಳೆಲ್ಲ ಅವನ ಆ ಪುಟ್ಟ ಸಂಸಾರದಲ್ಲಿ ಲೀನವಾಗಿರುತ್ತವೆ. ನಾನು ನನ್ನ ಕೋರ್ಟುಗಳು, ಜಡ್ಜಿಗಳು, ಕೇಸ್‌ಗಳು ಈ ಪ್ರಪಂಚದಲ್ಲಿ ಬೆರೆತು ಹೋಗಿರುತ್ತೇನೆ. ಆದರೂ ನಾವಿಬ್ಬರೂ ಕೂಡ ಹುಟ್ಟಿದವರೂನ್ನೋದು ತಪ್ಪುತ್ತೇನಮ್ಮ?

**ಕಮಲಮ್ಮ** : ತಪ್ಪೋದಲ್ಲ ಮಗೂ! ಹುಟ್ಟಿದ ಮೇಲೆ ಸಂಬಂಧ ತಪ್ಪೋಲ್ಲ; ಆದರೆ ನೀವಿಬ್ಬರೂ ಆ ಸಂಬಂಧಾನ ನೆನಪಿನಲ್ಲಿಟ್ಟುಕೊಂಡು, ಪ್ರೀತಿ ವಿಶ್ವಾಸಗಳಿಂದ ಅನ್ಯೋನ್ಯವಾಗಿರಬೇಕೂಂತ ನನ್ನಾಶೆ ಮಗೂ. ನಾನು ನಿಮ್ಮಿಬ್ಬರ ಸಂಗಡ ಅನಂತ ಕಾಲದವರೆಗೂ ಇರೋಳಲ್ಲ.

**ಅರವಿಂದ** : ಅಮ್ಮಾ?

**ಕಮಲಮ್ಮ** : ಹೌದು ಮಗೂ! ಅದಕ್ಕೋಸ್ಕರ ನಿನ್ನ ಹತ್ತಿರ ಒಂದು ಭಿಕ್ಷಾಬೇಡಿಕೋಬೇಕೂಂತ ಬಂದಿದೀನಿ.

**ಅರವಿಂದ** : ಇದೇನಮ್ಮಾ ಇಷ್ಟು ದೊಡ್ಡ ಮಾತಾಡುತ್ತಿದೀ?

**ಕಮಲಮ್ಮ** : ಹೌದು ಮಗೂ; ನೀನು 'ಹೂಂ' ಅಂದರೆ ಹೇಳುತ್ತೀನಪ್ಪಾ.

**ಅರವಿಂದ** : ನನ್ನ ಮದುವೆ ವಿಚಾರ ಒಂದು ಬಿಟ್ಟು ನೀನು ಏನು ಹೇಳಿದರೂ 'ಹೂಂ' ಅಂತೀನಮ್ಮ.

**ಕಮಲಮ್ಮ** : ನಿನ್ನ ಮದುವೆಯ ವಿಚಾರ ಮತ್ತೆ ನಾನು ಬದುಕಿರುವವರೆಗೂ ಎತ್ತೊಲ್ಲಪ್ಪ. ಅದು ಪೂರ್ಣವಾಗಿ ನಿನ್ನ ಅಧಿಕಾರಕ್ಕೆ ಸೇರಿದ್ದೂಂತ ನೀನು ಒಂದು ಬಾರಿ ಹೇಳಿಬಿಟ್ಟಮೇಲೆ ಮತ್ತೆ ಆ ವಿಚಾರಕ್ಕೆ ನಾವು ಪ್ರವೇಶ ಮಾಡೊಲ್ಲ. ನೋಡು ಮಗೂ! ಮುಂದೆ, ನೀನು ಮತ್ತೂ ಅಶೋಕ ನಿಮ್ಮಿಬ್ಬರಲ್ಲಿ ಯಾವ ಬಗೆಯ ಭಿನ್ನಾಭಿಪ್ರಾಯಗಳು ಬಂದರೂ ಕೂಡ ಈ ಮನೆಯಿಂದ ಹೊರಗೆ ಹೋಗದೇ ಅವನ್ನ ನಿಮ್ಮ ತಂದೆಯ ಕಿವಿಯವರೆಗೂ ಮುಟ್ಟಿಸದೆ ಅವರ ಮುಂದೆ ನೀವು ಎಂದಿನಂತೆ ಅನ್ಯೋನ್ಯವಾಗಿಯೇ

ಇಟ್ಟುಕೊಂಡು, ಅವರ ಮನಸ್ಸಿಗೆ ನೋವಾಗದ ಹಾಗೆ ನೋಡಿಕೊಳ್ಳುತ್ತೀನೀಂತ" ಭರವಸೆ ಕೊಡಬಲ್ಲೆಯಾ ಮಗೂ?

**ಅರವಿಂದ:** ಅಮ್ಮಾ, ನೀನಿರುವಾಗ ಆ ರೀತಿಯೆಲ್ಲಾ ಆಗೋದಕ್ಕೆ ಸಾಧ್ಯವೇಮ್ಮಾ?

**ಕಮಲಮ್ಮ:** ಮಗೂ, ನನ್ನ ಮಾತು ಬಿಡು. ನಾನಿನ್ನೆಷ್ಟು ದಿವಸ ಇರಬೇಕು. ನಾನಿರಲೀ ಇರದೇ ಹೋಗಲಿ, ನಿಮ್ಮಿಬ್ಬರ ಸಲುವಾಗಿ ನಿಮ್ಮ ತಂದೆಯ ಮನಸ್ಸಿಗೆ ನೋವಾಗದಹಾಗೆ ನೋಡಿಕೊಳ್ಳುತ್ತೀನೀಂತ ಮಾತು ಕೊಡೋದಕ್ಕೆ ಸಾಧ್ಯವೇ ಮಗು?

**ಅರವಿಂದ:** ಅಮ್ಮಾ! ನೀನು ತುಂಬಾ ನೊಂದಿದೀಯಾ. ಕೇಳಮ್ಮ! ಇಂದಿಗೇ ಅಲ್ಲ-ಮುಂದೆಂದಿಗೂ ನಾನು ಅಶೋಕನಿಗಾಗಲೀ, ನಿನಗಾಗಲೀ, ಅಪ್ಪನಿಗಾಗಲೀ ನೋವಾಗದ ರೀತಿ ಅಶೋಕನ ಸಂಗಡ ನಡೆಕೊಳ್ಳುತ್ತೇನೇಂತ ಭಗವಂತನ ಸಾಕ್ಷಿಯಾಗಿಯೂ ನಿನಗೆ ವಾಗ್ದಾನಮಾಡುತ್ತಿದ್ದೇನೆ. ಇದಕ್ಕೆ ತಪ್ಪಿದರೆ ನೀನು ಸಂಕಲ್ಪಿಸಿದ ಶಿಕ್ಷೆ......ಕಮಲಮ್ಮನು ಕಂಬನಿದುಂಬಿ ಅರವಿಂದನ ತಲೆಯನ್ನು ನೇವರಿಸಿ ಕೆಳಕ್ಕೆ ಬಂದುಬಿಟ್ಟಳು. ಅವಳ ಹೃದಯಾಂತರಾಳದಲ್ಲಿ ಎದ್ದಿದ್ದ ಬಿರುಗಾಳಿಯ ಅವಾಂತರವನ್ನು ಅರವಿಂದನು ತಿಳಿಯದಾದ. ಆದರೆ ಆಕೆಯು ಯಾವುದೋ ಒಂದು ಆಂತರಿಕ ದುಃಖದಿಂದ ಸಂಕಟಪಡುತ್ತಿದ್ದಾಳೆಂದು ಮಾತ್ರ ತಿಳಿದ. ಅದು ತನ್ನ ಮದುವೆಯ ವಿಚಾರಕ್ಕಾದರೆ, ಅದು ಸರಿಯಲ್ಲವೆಂದೂ, ಅದು ಕೇವಲ ಅವರ ಅಜ್ಞಾನದ ಕಾರಣವೆಂದೂ ಸಮಾಧಾನಮಾಡಿಕೊಂಡ.

೪

ಮೂರು ವರುಷಗಳು ಉರುಳಿಹೋಗಿದ್ದವು. ಕಮಲಮ್ಮನು ಹೇಳಿಕೊಳ್ಳಲಾಗದ ಕೊರಗಿನಲ್ಲೇ ಮತ್ತಗಾಗಿ ಹಾಸಿಗೆ ಹಿಡಿದುಬಿಟ್ಟಿದ್ದಳು. ಅಶೋಕನ ಮದುವೆಗೆ ಮುಂಚೆ ಇಪ್ಪತ್ತೈದು ವರುಷದ ನವತರುಣಿಯಂತೆ ಕಳೆಕಳೆಯಾಗಿ ಪ್ರಸನ್ನಮುಖಿಯಾಗಿ, ಪರಮಸುಖಿಯಾಗಿ ಮನೆಯೆಲ್ಲಾ ಓಡಾಡಿಕೊಂಡಿದ್ದ ಅವಳು, ಈ ಅಲ್ಪಾವಧಿಯಲ್ಲಿ ಅರವತ್ತುವರುಷದ ಮುದುಕಿಯಂತೆ ಬತ್ತಿ ಕುಗ್ಗಿ ಕಂಗಾಲಾಗಿ ಹಾಸಿಗೆಯಲ್ಲಿ ಬಿದ್ದಿರುವುದನ್ನು ಕಂಡವರೆಲ್ಲರೂ ಆಶ್ಚರ್ಯದಿಂದ ನೋಂದರು. ವಸಂತರಾಯನಂತೂ ಕಂಡ, ಕೇಳಿದ,

ಸಮಸ್ತ ಔಷಧೋಪಚಾರಗಳನ್ನೂ ನಡೆಸಿ, ಯಾವ ಬಗೆಯ ಗುಣವನ್ನೂ ಕಾಣದೆ ಕಳವಳಪಡುತ್ತಿದ್ದ. ತಾಯಿಯ ಸ್ಥಿತಿಗಾಗಿ ಅಶೋಕನು ಗೋಳಾಡುತ್ತಾ, ಕೆಲಸದಿಂದ ರಜಾ ತೆಗೆದುಕೊಂಡು, ತಾಯಿಯ ಪಕ್ಕವನ್ನು ಬಿಡದೆ, ಆಕೆಯ ಸೇವೆಯಲ್ಲಿಯೇ ನಿರತನಾಗಿಬಿಟ್ಟ. ಅರವಿಂದನೂ ಸಹ ಮನೆಯಲ್ಲಿರುವ ಅಲ್ಪಸ್ವಲ್ಪ ಸಮಯವನ್ನೂ ತಾಯಿಯ ಮಗ್ಗುಲಲ್ಲೇ ಕಳೆದು, ನಿಟ್ಟುಸಿರುಬಿಟ್ಟು ಹೊರಟುಹೋಗುತ್ತಿದ್ದ.

ಕಮಲಮ್ಮನ ಒತ್ತಾಯದಿಂದ ಮದುವೆಯಾದ ಎರಡನೇ ವರ್ಷವೇ ಅನ್ನಪೂರ್ಣೆಯನ್ನು ಮನೆಗೆ ಕರೆತಂದು, ಶಾಸ್ತ್ರವನ್ನು ಮುಗಿಸಿ ಮನೆಯಲ್ಲಿ ತಮ್ಮೊಂದಿಗೇನೇ ಇಟ್ಟುಕೊಂಡಿದ್ದರು. ಈಗ ಅನ್ನಪೂರ್ಣೆಯು ತೌರು ಮನೆಯಲ್ಲಿ ಗಂಡುಮಗುವನ್ನು ಹೆತ್ತು ಮೂರು ತಿಂಗಳಾಗಿದ್ದಿತು. ಒಳ್ಳೆಯ ದಿನ ಸೊಸೆಯನ್ನೂ ಮೊಮ್ಮಗುವನ್ನೂ ಕರೆತಂದು ಬಿಡುವಂತೆ ಕಮಲಮ್ಮನ ಇಚ್ಛೆಯನ್ನನುಸರಿಸಿ ವಸಂತರಾಯನು ಭುಜಂಗರಾಯನಿಗೆ ಕಾಗದವನ್ನು ಬರೆದಿದ್ದನು.

ಈ ಮೂರು ವರುಷಗಳ ಅವಧಿಯಲ್ಲಿ ಅರವಿಂದನ ಸ್ಥಿತಿಗತಿಗಳೂ ಸ್ವಲ್ಪ ಬದಲಾವಣೆ ಹೊಂದಿದ್ದುವು. ಅವನು ಏಕಾಂಗಿಯಾಗಿರಬೇಕಾಗಿ ಬಂದ ಕಾರಣ ಸಿಗರೇಟ್ ಸೇದುವುದು ಹೆಚ್ಚಾಗಿಹೋಗಿತ್ತು. ಸೇದಿಸೇದಿ ಬೇಸರಿಕೆಯಾದರೆ, ಅಲ್ಲಿಂದ ಹೊರಟು ಇನ್ಸ್ಟಿಟ್ಯೂಟ್‌ಗೆ ಹೋಗಿಬಿಡುತ್ತಿದ್ದ. ಅಲ್ಲಿ ರಾತ್ರಿ ಹತ್ತು ಹನ್ನೊಂದು ಘಂಟೆಯವರೆಗೂ ಇದ್ದುಬಿಡುತ್ತಿದ್ದ. ಅಲ್ಲಿನ ಕೆಲವು ಗೆಳೆಯರ ಪ್ರೇಮದಿಂದ ಆಗಾಗ ಸ್ವಲ್ಪ ಮಧುಪಾನವನ್ನೂ ಅಭ್ಯಾಸ ಮಾಡಿದ್ದ. ಮಹಡಿಯ ಮೇಲಿದ್ದ ಅರ್ಧನಾರೀಶ್ವರನೇ ಮೊದಲಾದ ಚಿತ್ರಪಟಗಳಿದ್ದ ಸ್ಥಳದಲ್ಲಿ ಈಗ ದೊಡ್ಡ ದೊಡ್ಡ ವಿಲಾಯತೀ ಗಂಡಸರ, ಹೆಂಗಸರ, ದಂಪತಿಗಳ ಬಣ್ಣಬಣ್ಣದ ಪಟಗಳು ವಿರಾಜಿಸುತ್ತಿದ್ದುವು. ಸ್ವತಂತ್ರವಾಗಿ ಪ್ರಾಕ್ಟೀಸ್ ಪ್ರಾರಂಭಿಸುವುದು ಸದ್ಯಕ್ಕೆ ಅಷ್ಟು ಅನುಕೂಲವಲ್ಲವೆಂದು ತನ್ನ ಹಳೆಯ ಸ್ಥಳದಲ್ಲೇ ಇದ್ದುಕೊಂಡು, ಆ ಹಿರಿಯ ಲಾಯರಿಗಾಗಿ ಆಗಾಗ ಕೆಲಸಮಾಡುತ್ತಿದ್ದ.

ಒಂದೊಂದು ವೇಳೆ ತಾನು ಮದುವೆಯಾಗಬೇಕೆಂದಿರುವ ನಲವತ್ತನೆಯ ವಯಸ್ಸಿಗೆ 'ನಾನು ಹೇಗಿದ್ದೇನೆಂ'ದು ಊಹಿಸಿ ನಿರುತ್ಸಾಹಿಯಾಗು

ತ್ತಿದ್ದ. 'ವಿಲಾಯತಿಯಲ್ಲಿಯೂ ಹೀಗೆಯೇ ಅವಿವಾಹಿತರು ಒಂಟಿಯಾಗಿ ಬಿಸುಸುಯ್ಯುತ್ತಾ ಇರುತ್ತಾರೆಯೇ !........ಇಲ್ಲ. ಇಲ್ಲ. ಎಂದಿಗೂ ಇಲ್ಲ. ಅವರ ಸಮಾಜ ಸುಖಮಯವಾದ ಸಮಾಜ. ಯಾವ ಬಗೆಯಾದ ಕಮಿಟ್ ಮೆಂಟೂ ಇಲ್ಲದೆ ಸರಿಸಮಾನಳಾದ ಗೆಳತಿಯರೊಂದಿಗೆ ಓಡಾಡಿಕೊಂಡು ಉಲ್ಲಾಸ ಪಡೆಯಬಹುದು. ಈ ದೇಶದಲ್ಲೋ ಹೆಣ್ಣು ಹುಟ್ಟುತ್ತಲೇ ಅವಕ್ಕೊಂದು ತಾಳಿಕಟ್ಟಿ ರಿಜರ್ವ್‌ಮಾಡಿಬಿಟ್ಟಿರುತ್ತಾರೆ. ಇನ್ನು ನಮಗೆ ಗೆಳತಿಯರೆಲ್ಲಿ ಸಿಕ್ಕಬೇಕು !..... ...ವಿಚಿತ್ರ ಸಮಾಜ ! ಒಂದು ವೇಳೆ ಯಾರಾದರೂ ತರುಣಿಯರು ಗೆಳೆತನಕ್ಕೆ ಸಿಕ್ಕಿ, ಅವರೊಂದಿಗೆ ಮಾತನಾಡುವುದನ್ನು ಕಂಡರೂ ಸಾಕು ಈ ಹಾಳು ಜನ ಸಮಸ್ತ ಅಸಹ್ಯ ವಿಚಾರಗಳನ್ನೂ ಇಬ್ಬರಿಗೂ ಹಚ್ಚಿ, ಬೆನ್ನುಹತ್ತುತ್ತಾರೆ........ಹಾಳು ಜನ !..... ...ಅಂತೂ ಒಂದು ವಯಸ್ಸಾದ ಮೇಲೆ ಕೇವಲ ಈ ಸ್ನೇಹಿತರ ಸಂಗಡಲೇ ಕಾಲಕಳೆಯುವುದು ಕಷ್ಟ. ಸ್ನೇಹಿತೆಯರೂ ಇರಬೇಕು. ಸ್ನೇಹಿತರು ಎಷ್ಟೇ ಸರಸದಿಂದ, ವಿಶ್ವಾಸದಿಂದ ನಮ್ಮ ಸಂಗಡ ವ್ಯವಹಾರ ಮಾಡಿದರೂ ಗೆಳತಿಯರ ಸ್ನೇಹದ ಆ ನಯ, ಆ ಸೊಂಪು, ಆ ರಮಣೀಯತೆ ಎಲ್ಲಿಂದ ಬರಬೇಕು ? ಗಂಡಸು ಎಷ್ಟಾದರೂ ಬರಡು .......ಆ ದಿನ ಶಿವದಾಸರು ಹೇಳಿದ್ದು ಅಷ್ಟಂತೂ ನಿಜ. ಗಂಡಸು ಗುಡುಗಬಲ್ಲ. ಗರ್ಜಿಸಬಲ್ಲ. ಹೆಂಗಸು ಹಾಡಬಲ್ಲಳು. ಇಬ್ಬರೂ ಸೇರಿದರೇನೇ ಜೀವನ ಸಂಗೀತ ಕೇಳಿಬರುವುದು.......ಹಾಗೆಂದ ಮಾತ್ರಕ್ಕೇ 'ತಾಳಿಕಟ್ಟು, ಮದುವೆಯಾಗು, ಹಂದಿಗಳ ಹಾಗೆ ಕಾಂವ್-ಕಾಂವ್, ಕುಂಯ್ಯೋ ಮರ್ರೋ ಅನ್ನೋ ; ಹತ್ತು ಹುಳುಗಳನ್ನ ಹೆತ್ತು ಅವುಗಳನ್ನ ಸುಧಾರಿಸುತ್ತಾ ಜೀವನದ ರೊಮಾನ್ಸ್‌ನೆಲ್ಲಾ ಹಾಳುಮಾಡಿಕೊಂಡು ಸಾಯಿ, ಅಂತಾರೆ !........ಲ್ಯಾಂಡ್ ಆಫ್ ಎಕ್ಸ್‌ಟ್ರೀಮ್ಸ್ !........ಏನು ಜನವೋ ನಮ್ಮೋರು. 'ಇಲ್ಲಾ, ಸನ್ಯಾಸಿಯಾಗಿ ಕಾಡಿಗೆ ಹೋಗು; ಇಲ್ಲವೇ ನಮ್ಮಹಾಗೇ ಹತ್ತುವರುಷದ ಹೆಣ್ಣುಪಿಳ್ಳೆ ಕಟ್ಟಿಕೊಂಡು ಅದನ್ನ ಆಡಿಸುತ್ತಾ ಕೂತುಕೋ' ಅಂತಾರೇ !........ಆಫ್‌ಕೋರ್ಸ್‌F............ಮ್ಯಾನ್‌ವಾಂಟ್ಸ್ ಎ ವುಮನ್; ಮೋರ್ ಆಸ್ ಎ ಫ್ರೆಂಡ್........ಎ ಮೇಟ್........ವೈ ಓನ್ಲಿ ಆಸ್ ಎ ವೈಫ್ ?......ಇದೇ ನಮಗೆ ಅರ್ಥವಾಗೊಲ್ಲ. ಈ ರೀತಿ ಅರವಿಂದನ ಮನಸ್ಸು ತನ್ನ ನೆಲೆಯನ್ನು ತಾನೇ ಅರಿಯಲಾರದೆ ಡೋಲಾಯಮಾನವಾಗಿ

ತೂಗಾಡುತ್ತಿದ್ದಿತು. ವಯೋಧರ್ಮಕ್ಕನುಗುಣವಾಗಿ ಅವನ ಹೃದಯವು ಗೆಳತಿಗಾಗಿ ಮಿಡಿಯುತ್ತಿತ್ತು. ವಿದ್ಯಾಭ್ಯಾಸದ ಚಿಂತೆಯಾಗಲೀ, ಮನೆಗೆ ದುಡಿಯಬೇಕೆಂಬ ಚಿಂತೆಯಾಗಲೀ ಇಲ್ಲದಿದ್ದ ಕಾರಣ ಈ ಹೃದಯದ ಕೂಗು ಆಗಾಗ ಅವನ ತನುಮನವನ್ನೆಲ್ಲಾ ಆವರಿಸಿ ಬೇಸರಪಡಿಸುತ್ತಿತ್ತು.

* * * *

ಈ ಪರಿಸ್ಥಿತಿಯಲ್ಲಿರುವಾಗ ಇತ್ತ ಇನ್‌ಸ್ಟಿಟ್ಯೂಟಿಗೆ ಲೇಡಿ ಮೆಂಬರು ಗಳನ್ನು ಸೇರಿಸಿಕೊಳ್ಳಬೇಕೆಂಬ ಇವನ ಮತ್ತು ಇವನಂಥ ಹತ್ತಾರುಜನ ಮೆಂಬರುಗಳ ಸೂಚನೆಯು ಕಡೆಗೆ ಬಹುಮತದಿಂದ ಸಭೆಯಲ್ಲಿ ಒಪ್ಪಿಗೆ ಯಾಯಿತು. ಆದರೆ ಮುಂದೆ ನಾಲ್ಕಾರು ತಿಂಗಳವರೆಗೂ ಯಾವ ಲೇಡಿಯೂ ಇನ್‌ಸ್ಟಿಟ್ಯೂಟಿಗೆ ಮೆಂಬರಾಗಲಿಲ್ಲ. ಆದ ಮೂವರು ಲೇಡಿ ಮೆಂಬರುಗಳೂ, ಮೊದಲಿನಿಂದಲೂ ಸದಸ್ಯರಾಗಿದ್ದ ತಮ್ಮ ಗಂಡಂದಿರೊಂದಿಗೆ ಕಾರಿನಲ್ಲಿ ಬರುವುದು, ಹೆಂಗಸರಿಗಾಗಿ ಮೀಸಲಾಗಿದ್ದ ಕೋಣೆಯಲ್ಲಿ ಕುಳಿತು ಪತ್ರಿಕೆಗಳ ನ್ನೋದುತ್ತಿರುವುದು, ತಮ್ಮ ಗಂಡಂದಿರು ಟೆನಿಸ್ ಆಡಿಕೊಂಡು ಬಂದ ನಂತರ ಅವರೊಂದಿಗೆ ಚಾಕೊಲೇಟ್ ತಿಂದು-ಹಾಲು ಕುಡಿದು ಸಂಗಡಲೇ ಹೊರಟುಹೋಗುತ್ತಿದ್ದರು. ಹೀಗಾಗಿ ವಿಲಾಯಿತೀ ವಾತಾವರಣಕ್ಕೆ ಇನ್‌ಸ್ಟಿಟ್ಯೂಟ್‌ನಲ್ಲಿ ಅವಕಾಶ ದೊರೆಯಲೇ ಇಲ್ಲ. ಅದರಿಂದನಾದಿಯಾಗಿ ಕೆಲವು ಸದಸ್ಯರು ನಿರಾಶರಾದರು. "ಹೀಗಾದರೆ ತಾನು ತನಗೆ ಸರಿಸಮಾನ ಳಾದ ಹೆಣ್ಣನ್ನು ಮುಂದೆ ಆರಿಸಿಕೊಳ್ಳುವುದಾದರೂ ಹೇಗೆ? ನೋಡುವುದಕ್ಕೇ ಹೆಣ್ಣು ಸಿಗದಿರುವಾಗ ಆರಿಸಿಕೊಳ್ಳುವ ಪ್ರಶ್ನೆಯೇ ಉಳಿಯುವುದಿಲ್ಲವಲ್ಲಾ ! ಎಂಥಾ ದೌರ್ಭಾಗ್ಯ ದೇಶವಿದು" ಎಂದು ಆರವಿಂದ ನೊಂದುಕೊಳ್ಳುತ್ತಿದ್ದ. ಆದರೆ "ನನಗೆ ನಲವತ್ತು ವರುಷವಾಗುವ ವೇಳೆಗೆ ನಮ್ಮ ದೇಶದ ಈ ಕಾಡು ಜನ ಸ್ವಲ್ಪ ಸುಧಾರಿಸಿಯಾರು ?" ಎಂದು ದೂರದ ಆಶೆಯಿಂದ ಸಮಾಧಾನ ಮಾಡಿಕೊಂಡ.

ಭುಜಂಗರಾಯನ ಅಸ್ವಸ್ಥತೆಯ ಕಾರಣ ಅಶೋಕನು ತಾನೇ ಮಾವನ ಮನೆಗೆ ಹೋಗಿ ಶುಭದಿನದಲ್ಲಿ ತನ್ನ ಹೆಂಡತಿ ಅನ್ನಪೂರ್ಣೆಯನ್ನೂ ಮಗು ವನ್ನೂ ಕರೆತಂದ. ಮಗುವು ಅಪ್ಪನನ್ನೇ ಹೋತಿತ್ತು; ಸ್ವಲ್ಪ ಕಪ್ಪು ಮಿಶ್ರ ವಾದ ಬಿಳುಪುಬಣ್ಣವಿದ್ದರೂ, ಮೈಕೈ ತುಂಬಿಕೊಂಡು ಸದಾ 'ಪಿಳಿಪಿಳಿ'

ಎಂದು ಕಣ್ಣುಬಿಟ್ಟುಕೊಂಡೇ ಮಲಗಿರುತ್ತಿದ್ದಿತು. ನಿದ್ದೆ ಬರುವುದಕ್ಕೆ ಮುಂಚೆ, ಹೊಟ್ಟೆ ಹಸಿದಾಗ ಮಾತ್ರ ಸ್ವಲ್ಪ ಅಳುತ್ತಿತ್ತು. ತಲೆಯತುಂಬ ಗುಂಗುರು ಕೂದಲು; ದಪ್ಪವಾದ ಕೂಡುಹುಬ್ಬು; ಕಾಡಿಗೆಗಣ್ಣು. ಮನೆಗೆ ಬಂದ ಮಗುವನ್ನು ನೋಡಿ ಕಮಲಮ್ಮನ ಅಷ್ಟು ದಿವಸದ ನಿಶ್ಶಕ್ತಿಯು ಸ್ವಲ್ಪ ಹೊತ್ತು ಮಾಯವಾಗಿದ್ದಂತೆ ಕಂಡುಬಂದಿತು. ತಾನೇ ಎದ್ದು ಆರತಿಹಿಡಿದು ಅಡುಗೆಯವನ ಹೆಂಡತಿಯೊಂದಿಗೆ ಗಾಡಿಯಿಂದಿಳಿದ ಮೊಮ್ಮಗುವಿಗೆ ಆರತಿ ಎತ್ತಿ, ದೃಷ್ಟಿ ನೀವಾಳಿಸಿ, ತಾನೇ ಎತ್ತಿಕೊಂಡು ತೊಡೆಯ ಮೇಲೆ ಮಲಗಿಸಿ ಕೊಂಡು ಆಟವಾಡಿಸುತ್ತಾ ಮುದ್ದಾಡುತ್ತಿದ್ದಳು. ನಿಶ್ಶಕ್ತಿಯಲ್ಲಿಯೂ ಅವಳ ಸಡಗರವನ್ನು ಕಂಡು ಅಶೋಕನಿಗೂ ವಸಂತರಾಯನಿಗೂ ಮನಸ್ಸಿಗೆ ಕ್ಷಣಿಕ ಸಂತೋಷವೂ, ಅದು ಆರಿದನಂತರ ಗಾಢವಾದ ದುಃಖವೂ ಉಂಟಾದುವು. ಅಂದು ಸಂಜೆ ಮಗುವಿಗೆ ಆರತಿಯ ಏರ್ಪಾಟು ಮಾಡಬೇಕೆಂದೂ, ನೆಂಟರಿಷ್ಟರನ್ನೆಲ್ಲಾ ಕರೆಯಬೇಕೆಂದೂ ಕಮಲಮ್ಮನು ಗಂಡನಿಗೆ ಹೇಳಿದಳು. ಅವಳ ಬಾಯಲ್ಲಿ ಬಂದುದೇ ತಡ, ತನ್ನ ಭಾವ ಮೈದುನನ ಮನೆಗೆ ಹೋಗಿ ಅವನ ಹೆಂಡತಿ ಮಗಳನ್ನು ಸಂಗಡ ಕರೆದುಕೊಂಡು ಬಂದು, ಒಂದು ಟ್ಯಾಕ್ಸಿಯನ್ನು ಗೊತ್ತುಮಾಡಿ ಬರಬೇಕಾದ ಹೆಂಗಸರನ್ನೆಲ್ಲಾ ಕರೆಯಲು ಅವರನ್ನು ಕಳುಹಿಸಿಕೊಟ್ಟು ಮಿಕ್ಕ ಏರ್ಪಾಟುಗಳನ್ನು ಮಾಡಲು ಮಗನೊಂದಿಗೆ ಹೊರಟುಹೋದನು.

ಅತ್ತೆಯ ಆಸೆಯಂತೆ ಅನ್ನಪೂರ್ಣೆಯು ಮಗುವಿನ ಕಬ್ಬಿಣದ ತೊಟ್ಟಿಲನ್ನು ಅವಳ ಮಂಚದ ಮಗ್ಗುಲಲ್ಲೇ ಇಟ್ಟು ಅದಕ್ಕೆ ಗಿಣಿ ಚಪ್ಪರವನ್ನೂ ಕಟ್ಟಿ, ಸೊಳ್ಳೆಪರದೆ ಹಾಕಿದಳು. ತೌರುಮನೆಯವರು ತನ್ನ ಮಗುವನ್ನು ಬಾಲಕೃಷ್ಣನೆಂದು ಕರೆಯುತ್ತಿದ್ದು, ನಾಮಕರಣದ ದಿನ ವಸಂತರಾಯನ ಇಚ್ಛೆಯಂತೆ ಅವನ ತಂದೆಯಾದ ಮುಕುಂದ ರಾಯನ ಹೆಸರಿಡಲ್ಪಟ್ಟಿದ್ದರೂ, ಅತ್ತೆಯಾದ ಕಮಲಮ್ಮನು ಮಗುವನ್ನೆತ್ತಿಕೊಂಡು ಮುದ್ದಿಸುತ್ತಾ "ಬಾ ನನ್ನ ಪುಟ್ಟೂ! ನನ್ನ ಪುಟ್ಟಣ್ಣಾ!" ಎಂದದ್ದನ್ನು ಕೇಳಿ, ತನ್ನ ಮಗುವಿಗೆ ಹಿರಿಯರಾದ ಅತ್ತೆಯವರು ಪ್ರೇಮದಿಂದ ಹೇಳಿದ ಈ ಹೆಸರೇ ಸರಿಯಾದದ್ದೆಂದು ತಿಳಿದು ಆನಂದಿಸಿದಳು.......ಆದರೆ ಈ ಕೆಲವಾರು ತಿಂಗಳಲ್ಲೆ ಅತ್ತೆಯವರ ದೇಹಸ್ಥಿತಿಯು ಬಹು ಸೂಕ್ಷ್ಮವಾಗುತ್ತಾ ಬಂದಿರುವು

ದನ್ನು ಕಂಡು, ತಾನೆಲ್ಲಿ ತಬ್ಬಲಿಯಾಗಿಬಿಟ್ಟೇನೋ ಎಂಬ ಭಯವು ಮನಸ್ಸನ್ನು ನಡುಗಿಸುತ್ತಿದ್ದಿತು.

ಅಂತೂ ಆ ದಿನ ಸಂಜೆ ಮನೆಯಲ್ಲಿ ಎಂದಿನಂತೆ ಸಡಗರ. ನೂರಾರು ಹೆಂಗಸರು ಹಾಲಿನ ತುಂಬ 'ಗಿಜಬಿಜ' ನೆರೆದಿದ್ದರು. ಕಮಲಮ್ಮನು ಕೈಲಾಗದಿದ್ದರೂ ಸಹ ತನ್ನ ಮಂಚವನ್ನು ಬಿಟ್ಟೆಳೆದು, ಸೊಸೆಗೆ ಜಡೆಹೆಣೆದು, ಒಡವೆಗಳನ್ನೆಲ್ಲಾ ಹೇರಿ, ತಾನು ಹೆರಳುಹಾಕಿಕೊಂಡು, ಧರ್ಮಾವರದ ಸೀರೆ ಯುಟ್ಟು, ಗೋಡೆಯೊರಗಿ ಬಂದವರ ಸಂಗಡಲೆಲ್ಲಾ ಎಂದಿನ ಪ್ರೀತಿ ವಿಶ್ವಾಸಗಳಿಂದ ಮಾತನಾಡುತ್ತಾ, ಆನಂದಮಗ್ನಳಾಗಿದ್ದಳು. ಪೆರಾಂಡದಲ್ಲಿ ಕುಳಿತು ಹೆಂಡತಿಯ ಸಂಭ್ರಮ ಸಂತೋಷಗಳನ್ನು ಕಂಡ ವಸಂತರಾಯನಿಗೆ ಮನಸ್ಸಿಗೆ ಇದ್ದಕ್ಕಿದ್ದಂತೇ ಏನೋ ಭಯತೋರಿತು. ಎದೆ 'ಢಕ್' ಎಂದು ಸ್ವಲ್ಪಹೊತ್ತು ವೇಗವಾಗಿ ಬಡಿದುಕೊಳ್ಳುತ್ತಿದ್ದಿತು. ತಂದೆಯ ಆತಂಕವನ್ನು ಪಕ್ಕದಲ್ಲಿ ಕುಳಿತಿದ್ದ ಅಶೋಕನು ಅರಿಯದಾದ. ಅಂದಿನ ಓಡಾಟದ ಕೆಲಸ ವೆಲ್ಲಾ ಕಮಲಮ್ಮನ ತಮ್ಮನ ಹೆಂಡತಿ, ಮಗಳು ಮತ್ತಾ ಅಡಿಗೆಯವನ ಹೆಂಡತಿ ಇವರ ಪಾಲಿಗೆ ಬಿದ್ದಿತು; ಆದರೆ ಕಮಲಮ್ಮನು ಓಡಾಡದಿದ್ದರೂ ತನ್ನ ನೇತೃತ್ವದಲ್ಲೇ ಕಾರ್ಯಕಲಾಪಗಳನ್ನೆಲ್ಲಾ ನಡೆಸುತ್ತಿದ್ದುದರಿಂದ, ಎಲ್ಲವೂ ಎಂದಿನಂತೆ ಸಾಂಗವಾಗಿ ವಿಜೃಂಭಣೆಯಿಂದಲೇ ನಡೆದುವು.

ಮನೆಯಲ್ಲಿ ಆ ದಿನ ಬಹಳ ಗದ್ದಲವಾಗುವೆಂಬುದನ್ನು ಊಹಿಸಿ ತಿಳಿದಿದ್ದ ಅರವಿಂದನು ಆ ದಿನ ರಾತ್ರಿ ಹತ್ತುಘಂಟೆಯಾದರೂ ಇನ್ಸ್ಟಿಟ್ಯೂಟಿ ನಿಂದ ಹಿಂದಿರುಗಲಿಲ್ಲ. ಅವನು ಮನೆಗೆ ಬಂದಾಗ ಸುಮಾರು ಹನ್ನೊಂದು ಘಂಟೆ. ಇತ್ತ ನೆರೆದಿದ್ದವರೆಲ್ಲರೂ ಅರಸಿನ ಕುಂಕುಮ ಬಾಗಿನಗಳನ್ನು ತೆಗೆದುಕೊಂಡು ತಮ್ಮ ತಮ್ಮ ಮನೆಗೆ ಹಿಂದಿರುಗಿದ ನಂತರ ಕಮಲಮ್ಮನು ಮೆಲ್ಲಗೆ ಹೋಗಿ ತನ್ನ ಹಾಸಿಗೆಯಲ್ಲಿ ಮಲಗಿಬಿಟ್ಟವಳು. ಬಹು ಹೊತ್ತು ಮಾತನಾಡದೆ ಕಣ್ಣುಮುಚ್ಚಿದ್ದಳು. ಆಯಾಸಕ್ಕೆಂದು ವಸಂತರಾಯ ನಾಗಲೀ ಅಶೋಕನಾಗಲೀ ಅವಳನ್ನೆಚ್ಚರಿಸುವ ಸಾಹಸ ಮಾಡಲಿಲ್ಲ. ರಾತ್ರೆ ಸುಮಾರು ಒಂಭತ್ತೂವರೆ ಘಂಟೆಗೆ ಕಣ್ಣುಬಿಟ್ಟ ಕಮಲಮ್ಮನು "ಹಾಲು !" ಎಂದಳು. ಕೂಡಲೇ ಅಶೋಕನು ಒಂದು ಲೋಟ ಹಾಲನ್ನು ತಂದುಕೊಟ್ಟ. ಮೆಲ್ಲಗೆ ಕತ್ತೆತ್ತಿ ಆ ಹಾಲನ್ನು ಸ್ವಲ್ಪಸ್ವಲ್ಪವಾಗಿ ಕುಡಿದು

ಮತ್ತೆ ಮಲಗಿಕೊಂಡಳು. ಮತ್ತೆ ಕಣ್ಣುಬಿಟ್ಟಾಗ ಸೊಸೆಯನ್ನು ಸನ್ನೆಮಾಡಿ ಹತ್ತಿರ ಕರೆದು ತೊಟ್ಟಿಲನ್ನು ತಮ್ಮ ರೂಮಿಗೆ ತೆಗೆದುಕೊಂಡು ಹೋಗುವಂತೆ ಹೇಳಿದಳು. ಅನ್ನಪೂರ್ಣೆಗೆ ಸ್ವಲ್ಪ ಗಾಬರಿಯಾಯಿತು.

ಆ ದಿನ ರಾತ್ರೆ ಹನ್ನೊಂದು ಗಂಟೆಯ ಒಳಗೆ 'ಅರವಿಂದ, ಅರವಿಂದ' ಎಂದು ಆಗಾಗ್ಗೆ ನಾಲ್ಕು ಬಾರಿ ಜ್ಞಾಪಿಸಿಕೊಂಡಿದ್ದಳು; ಆದರೆ ಅರವಿಂದ ಇನ್ನೂ ಬಂದಿರಲಿಲ್ಲ. ಅಶೋಕನೇ ನಾಲ್ಕೈದು ಬಾರಿ ಮಹಡಿಯ ಮೇಲೆ ಹೋಗಿ ನೋಡಿಕೊಂಡು ಹಿಂದಿರುಗಿದ್ದ. ಕಮಲಮ್ಮನಿಗೆ ಮತ್ತು ಹತ್ತಿದಂತಾಗಿದ್ದಿತು. ಅಶೋಕ, ವಸಂತರಾವ್, ಕಮಲಮ್ಮ, ತಮ್ಮನ ಹೆಂಡತಿ ಇಷ್ಟು ಜನರೂ ಅವಳ ಮಂಚದ ಸುತ್ತಲೂ ಕುಳಿತಿದ್ದರು. ಅನ್ನಪೂರ್ಣೆಯು ಎಷ್ಟು ಹೇಳಿದರೂ ನಿದ್ದೆ ಮಾಡದೆ ಆಗಾಗ್ಗೆ ಮಗುವನ್ನು ತನ್ನ ರೂಮಿನಲ್ಲಿ ಬಿಟ್ಟು ಬಂದು ಅತ್ತೆಯ ಬಳಿ ಇರುತ್ತಿದ್ದಳು. ಬೆಳಗಿನಜಾವ ನಾಲ್ಕು ಘಂಟೆ ಸುತ್ತ ಕುಳಿತು ಹಾಗೇ ಕಣ್ಮುಚ್ಚಿದ್ದವರು ತಟ್ಟನೆ ಬೆಚ್ಚುಬಿದ್ದಿದ್ದರು. ಕಣ್ಣು ಬಿಟ್ಟು ನೋಡಿದರೆ ಕಮಲಮ್ಮನು "ಪುಟ್ಟೂ! ಪುಟ್ಟಣ್ಣಾ!!" ಎಂದು ಕನವರಿಸಿಕೊಳ್ಳುವಳಂತೆ ಕೂಗುತ್ತಿದ್ದಾಳೆ. ಅಶೋಕನು ತಟ್ಟನೆ ಹೋಗಿ ನಿದ್ರಿಸುತ್ತಿದ್ದ ಮಗುವನ್ನೆತ್ತಿ ತಂದು ತಾಯಿಯ ಮುಂದೆ ತನ್ನ ತೊಡೆಯ ಮೇಲೆ ಮಲಗಿಸಿಕೊಂಡ. ಕಮಲಮ್ಮನು ಅದರ ತಲೆಯನ್ನು ನೇವರಿಸುತ್ತಾ, "ಅರವಿಂದ?" ಎಂದು ವಸಂತರಾಯನ ಕಡೆಗೆ ನೋಡಿ ಪ್ರಶ್ನಿಸಿದಳು. ವಸಂತರಾಯನು ಮಹಡಿಯ ಮೇಲೆ ಹೋದ. ಆ ಮೆಟ್ಟಲು ಹತ್ತಿ ವರ್ಷಗಳಾಗಿದ್ದುವು. ಹೋಗಿ ಮೆಲ್ಲಗೆ ಬಾಗಿಲು ಬಡಿದು 'ಅರವಿಂದಾ!' ಎಂದು ಕೂಗಿದ. ನಿದ್ದೆ ಬಾರದೇ, ಅರೆ ನಿದ್ದೆಯಲ್ಲಿ ಕನವರಿಸಿಕೊಳ್ಳುತ್ತಿದ್ದ ಅರವಿಂದನು, ತಟ್ಟನೆದ್ದು ದೀಪ ಹಾಕಿ ಬಾಗಿಲು ತೆರೆದ. ಎಂದೂ ಇಲ್ಲದ್ದು ಈ ಅವೇಳೆಯಲ್ಲಿ ತಂದೆಯ ಮುಖವನ್ನು ಕಾಣುತ್ತಲೇ ಅರವಿಂದನ ಗಂಟಲು ಬತ್ತಿ ಬಂದಿತು. ಅವಾಕ್ಕಾಗಿ ನಿಂತುಬಿಟ್ಟ. ವಸಂತರಾಯನು "ಅರವಿಂದ....! ನಿಮ್ಮ ತಾಯಿಗೊ....! ನಿಮ್ಮ ತಾಯಿಗೊ....!" ಮುಂದೆ ಮಾತು ಹೊರಡದೆ ಗದ್ಗದಿತನಾಗಿ ಕಂಬನಿದುಂಬಿ ಕೆಳಗಿಳಿದು ಬಂದ. ಅರವಿಂದನು ಘಾಬರಿಗೊಂಡು ತಂದೆಯನ್ನು ಹಿಂಬಾಲಿಸಿ ತಾನು ಹಿಂದಿದ್ದ ಕೋಣೆಗೆ ಬಂದ. ಅಲ್ಲಿಗೆ ಅವನು ಬಂದೇ ವರ್ಷಗಳಾಗಿದ್ದುವು. ತಾಯಿಯು ಮಂಚದ ಮೇಲೆ

ಕಣ್ಣು ಮುಚ್ಚಿ ಬಿಡುತ್ತಾ ಮಲಗಿರುವುದನ್ನೂ, ಸುತ್ತಲೂ ಇವರೆಲ್ಲಾ ನಿಂತಿರುವುದನ್ನೂ ಕಂಡು, ಸರ್‍ರನೆ ತಾಯಿಯ ಬಳಿಗೆ ಬಂದು ಪಕ್ಕದಲ್ಲಿ ಮೊಣಕಾಲೂರಿ ಕುಳಿತು, ತಾಯಿಯ ಕೈಯ್ಯನ್ನು ಹಿಡಿದು, "ಅಮ್ಮಾ! ನಾನು! ಅರವಿಂದ ಬಂದಿದ್ದೇನೆ" ಎಂದು ಹೇಳುತ್ತ ಕಂಬನಿದುಂಬಿದ. ಕಮಲಮ್ಮನು ಕಣ್ಣು ಬಿಟ್ಟು ಮಗನನ್ನು ಚೆನ್ನಾಗಿ ದೃಷ್ಟಿಸಿ ನೋಡಿ "ಮಗೂ! ನಾನು.... ನೀನು .... ಮುಂದೆ .... ಎಂದು ಮದುವೆಯಾದರೂ .... ಶಾಸ್ತ್ರದಂತೆ .... ಮದುವೆಯಾಗು .... ಇಲ್ಲದೇ ಹೋದರೆ .... ಮುಂದೆ .... ಹುಟ್ಟೋ .... ಮಕ್ಕಳು .... ಕಂಗಾಳಿಗಳಾಗುತ್ತಾರೆ .... ಅರವಿಂದ! ಅಗೋ! ಆ ಮಗು .... ಪುಟ್ಟ .... ನಿಮ್ಮ ವಂಶದ ಕುಡಿ .... ನಮಗೆಲ್ಲಾ .... ಸದ್ಗತಿ .... ಕೊಡೋನು .... ಅಶೋಕಾ! ಬಾ!" ಎಂದಳು. ಅಶೋಕನು ಮಗುವನ್ನು ಹೆಂಡತಿಯ ಕೈಗೆ ಕೊಟ್ಟು ತಾನು ಬಂದು ಅರವಿಂದನ ಪಕ್ಕದಲ್ಲಿ ಕುಳಿತ. ಕಮಲಮ್ಮನು ಇಬ್ಬರ ತಲೆಯನ್ನೂ ನೇವರಿಸುತ್ತಾ ಒಬ್ಬರ ಕೈಯನ್ನೊಬ್ಬರ ಕೈಲಿಟ್ಟು "ಅರವಿಂದ .... ! ಅಶೋಕ .... ! ಸೂರ್ಯಚಂದ್ರರಿರೋವರೆಗೂ .... ನೀವಿಬ್ಬರೂ .... ಹೀಗೆ .... ಪ್ರೇಮದಿಂದೆ .... ಒಟ್ಟಿಗೆ .... ಇರೀ .... ಅಶೋಕ .... ಅರವಿಂದ .... ಒಂಟಿಯಾಗಿದ್ದಾನೆ .... ಅವನು ಹಸಿವು .... ಬಾಯಾರಿಕೆ .... ನೋವು .... ನಿಂದಾಗಿರಲಿ. ನಾನು .... ಅವನನ್ನು .... ಹ್ಯಾಗೆಕಾಣುತೀನೋ .... ನೀನೂ ಅವನನ್ನು .... ಹಾಗೇ ನೋಡಿಕೋಬೇಕು ...." ಎಂದು ಹೇಳಿ ಅನ್ನಪೂರ್ಣೆಗೆ ಸನ್ನೆ ಮಾಡಿ ಹತ್ತಿರ ಕರೆದು, ಅವಳನ್ನೂ ಮಗುವನ್ನೂ ಗಲ್ಲ ಮುಟ್ಟಿ, ತಲೆ ಸವರಿ ಕಂಬನಿದುಂಬಿದಳು.

ಸ್ವಲ್ಪ ಹೊತ್ತು ಕೋಣೆಯು ತುಂಬ ನಿಶ್ಶಬ್ದ. ಮೂಲೆಯಲ್ಲಿ ನಿಂತು ಕಣ್ಣೀರಿಡುತ್ತಿದ್ದ ವಸಂತರಾಯನನ್ನು ಅಶೋಕನು ತಾಯಿಯ ಸನ್ನೆಯಂತೆ ಕರೆತಂದ. ಕಮಲಮ್ಮನು ಗಂಡನಿಗೆ ಸನ್ನೆ ಮಾಡಿ ಎದುರಿಗೆ ತೂಗುಹಾಕಿದ್ದ ಗುರುಗಳ ಪಟಕ್ಕೆ ಹಚ್ಚಿದ್ದ ಕುಂಕುಮ ಪ್ರಸಾದವನ್ನು ತರಿಸಿ ತನ್ನ ಹಣೆಗೆ ಹಚ್ಚುವಂತೆ ಹೇಳಿದಳು. ವಸಂತರಾಯನು ಮಗುವಿನಂತೆ ಕುಂಕುಮ ಪ್ರಸಾದವನ್ನು ತಂದು ಹೆಂಡತಿಯ ಹಣೆಗಿಟ್ಟ. ಕಮಲಮ್ಮನು ಎಲ್ಲರನ್ನೂ ಒಮ್ಮೆ ಬಿರಿನೋಟದಿಂದ ನೋಡಿ "ಗುರುನಾಥಾ!" ಎಂದು ಹೇಳಿ ಕಣ್ಣು ಮುಚ್ಚುತ್ತಿದ್ದಂತೆಯೇ ಕತ್ತು ಓರೆಯಾಯಿತು. ಹಿಂದಿನ ಸಂಜೆ, ಸಡಗರ

ದಿಂವ ಹತ್ತಾರು ಜನರು ನೆರೆದು ನಲಿಯುತ್ತಿದ್ದ ಮನೆಯಲ್ಲಿ ಈ ಬೆಳಿಗ್ಗೆ ನೂರಾರು ಜನರು ನೆರೆದು ಶೋಕಪ್ರದರ್ಶನ ಮಾಡುತ್ತಿದ್ದಾರೆ. ಅಶೋಕನ ದುಃಖಕ್ಕಿಂತ ಅರವಿಂದನ ದುಃಖವೇ ನೆಲೆಯಿಲ್ಲದೆ ಉಕ್ಕಿ ಉಕ್ಕಿ ಹೆಚ್ಚು ತ್ತಿದ್ದಿತು. ಯಾರು ಸಮಾಧಾನ ಮಾಡಿದರೂ, ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳುತ್ತಿದ್ದ. ಅಂತೂ ವಸಂತರಾಯನ ಜೀವನ ಲಕ್ಷ್ಮಿ ಕಣ್ಮರೆಯಾಗಿ ಬಿಟ್ಟಳು.

೫

ಐದು ವರುಷಗಳು ಕಳೆದಿದ್ದುವು. ಈ ಮಧ್ಯೆ ವಸಂತರಾಯನು ತನ್ನ ಹಣ ಕಾಸು ಸ್ವತ್ತುಗಳಲ್ಲಿ ಎರಡು ಭಾಗವನ್ನು ತನ್ನಿಬ್ಬರ ಮಕ್ಕಳಿಗೂ, ಮಿಕ್ಕೊಂದು ಭಾಗದಲ್ಲಿ ಅರ್ಧವನ್ನು ಸ್ಥಳೀಯ ಅಬಲಾಶ್ರಮಕ್ಕೂ, ಮಿಕ್ಕರ್ಧ ವನ್ನು ಶಿವದಾಸರ ಆಶ್ರಮಕ್ಕೂ ಹಂಚಿ ರಿಜಿಸ್ಟರ್ ಮಾಡಿಸಿಬಿಟ್ಟು, ತಾನು ಶಿವದಾಸರೊಂದಿಗೆ ಹೃಷೀಕೇಶಕ್ಕೆ ಹೊರಟುಹೋಗಿದ್ದ. ಅಲ್ಲಿಗೆ ಅವನ ಗೃಹಸ್ಥಾಶ್ರಮ ಧರ್ಮವು ಪರಿಪೂರ್ಣವಾಗಿ ಸನ್ಯಾಸಾಶ್ರಮವು ಪ್ರಾರಂಭ ವಾಗಿತ್ತು. ಇಲ್ಲಿ ಅಶೋಕ ಅನ್ನಪೂರ್ಣೆಯರಿಗೆ ಮತ್ತೊಂದು ಗಂಡು ಮಗು ವಾಗಿ ಎರಡು ವರ್ಷವಾಗಿತ್ತು. ಈ ವೇಳೆಗೆ ಐದು ವರುಷದವನಾಗಿದ್ದ ಬಾಲಕೃಷ್ಣ ಉರುಫ್ ಮುಕುಂದ ಉರುಫ್ ಪುಟ್ಟ ಮಹಾ ತುಂಟನಾಗಿ ಬಿಟ್ಟಿದ್ದ. ಯಾರ ಸಹಾಯವೂ ಇಲ್ಲದೆ ಮಹಡಿ ಮೆಟ್ಟಿಲನ್ನು ಸರಾಗವಾಗಿ ಹತ್ತಿ ಬಂದು "ಅಪ್ಪಾ!" ಎಂದು ಬಾಗಿಲು ಗುದ್ದಿ ತೆಗೆಸಿ, ಅರವಿಂದನು ಒಳಗೆ ಕರೆಯದಿದ್ದರೂ ತಾನೇ ಹೋಗಿ ಸೋಫಾ ಹತ್ತಿರ ಕುಳಿತು "ಗುರು ನಾಥಾ! ಗುರುನಾಥಾ! ಕರುಣಿಸು ಸನಮತಿ ಗುರುನಾಥಾ!" ಎಂದು ತಾನೇ ಹಾಡಿಕೊಂಡು ಕುಣಿಯುತ್ತಿದ್ದ. ಅವನು ಏಕಾಂಗಿಯಾಗಿ ಆಡು ತ್ತಿರುವುದನ್ನು ಕಂಡ ಅರವಿಂದನು, "ನಾನೇಕೆ ಒಂಟಿಯಾಗಿರಲಾರೆ .... ? ನನಗಿರುವ ರೋಗವೇನು?" ಎಂದುಕೊಂಡು ಜೇಬಿನಿಂದ ಎರಡು ಬಿಸ್ಕ ತ್ತನ್ನೋ, ಚಾಕಲೆಟ್ಟನ್ನೋ ಅವನ ಪುಟ್ಟ ಕೈಗಳಲ್ಲಿಟ್ಟು ಅವನ ಕರೀ ಕೆನ್ನೆ ಗೊಂದು ಮುತ್ತು ಕೊಟ್ಟರೇನೇ ಪುಟ್ಟು ಮತ್ತೆ ಕೆಳಗಿಳಿದುಹೋಗುತ್ತಿದ್ದ. ಇಲ್ಲದಿದ್ದರೆ ಕೆಳಗೆ ಹೋಗುವುದಿರಲಿ ತನ್ನ ಹಾಡನ್ನು ನಿಲ್ಲಿಸದೆ ಪಲ್ಲವಿ ಚರಣ

ಹಿಡಿಯುವ ವರೆಗೂ ಹತ್ತಾರು ರಾಗಗಳನ್ನೆಲ್ಲಾ ಬೆರಸಿ ಕಿರುಚುತ್ತಿರುವನು. ಎರಡನೆಯ ಮಗ "ಚಿಕ್ಕಪುಟ್ಟ"ನಿಗೆ ಶಿವದಾಸನೆಂದು ನಾಮಕರಣ ಮಾಡಿದ್ದರು. ಅವನು ಮನೆಯ ಹಾಲಿನಲ್ಲಿ ಅಂಗಳದಲ್ಲೇ ಸಾಕಷ್ಟು ಹಾವಳಿ ಮಾಡುತ್ತಿದ್ದನು. ಅಶೋಕನಿಗೆ ಕಾಲೇಜಿನ ಹುದ್ದೆಯಲ್ಲಿ ಬಡ್ತಿಯಾಗಿ ಕಾಲೇಜ್ ಹಾಸ್ಟೆಲ್ ವಾರ್ಡನ್ ಆಗಬೇಕೆಂದು ಆರ್ಡರ್ ಆಗಿತ್ತು. ಆದರೆ ತನ್ನ ಸೋದರನನ್ನು ಒಂಟಿಯಾಗಿ ಬಿಟ್ಟುಬರಲಾರೆನೆಂದು ಹೇಳಿಬಿಟ್ಟಿದ್ದನು.

ಇತ್ತ ಇನ್ಸ್ಟಿಟ್ಯೂಟಿನ ವಿದ್ಯಾಮಾನಗಳೂ ಬದಲಾಯಿಸುತ್ತಾ ಬಂದಿದ್ದುವು. ಹಲವಾರು ಮಹಿಳೆಯರು ಸದಸ್ಯರಾಗಿದ್ದರು. ಆದರೆ ಬರುವವರೆಲ್ಲರೂ ತಮ್ಮ ಗಂಡಂದಿರೊಂದಿಗೋ, 'ಆಯಾ' ಮತ್ತು ಮಕ್ಕಳೊಂದಿಗೋ ಬಂದು ತಮ್ಮ ಸ್ಪೆಷಲ್ ಹಾಲಿನಲ್ಲಿ ಪೇಪರೋದಿಕೊಂಡು, ಹರಟುತ್ತಿದ್ದು, ಕೇರಂ ಮೊದಲಾದುವನ್ನು ಆಡಿಕೊಂಡು ಹೊರಟುಹೋಗುತ್ತಿದ್ದರು. ಟೆನಿಸ್‌ಗೆ ಬರುತ್ತಿದ್ದ ಕೆಲವು ತರುಣಿಯರು ಅವಿವಾಹಿತರಾಗಿದ್ದರು. ಆದುದರಿಂದ ಅವರು ತಮ್ಮ ಅಣ್ಣಂದಿರೊಂದಿಗೆ ಬಂದು, ಅವರೊಂದಿಗೇನೇ ಸಿಂಗಲ್ಸ್ ಅಥವಾ ಅವರ ಗೆಳತಿಯರೊಂದಿಗೇ ಮತ್ತು ಗೆಳತಿಯರ ಅಣ್ಣಂದಿರೊಂದಿಗೆ ಡಬಲ್ಸ್ ಆಡಿಕೊಂಡು ಹೊರಟುಹೋಗುತ್ತಿದ್ದರು. ಬರಬರುತ್ತ ಅರವಿಂದನು ತನ್ನ ವಿವಾಹದ ವಿಚಾರದಲ್ಲಿ ನಿರಾಶನಾಗುತ್ತ ಬಂದಿದ್ದನು. ಇದೊಂದು ಕೂಪವನ್ನು ನಂಬಿಕೊಂಡರೆ ತಾನು ಬಯಸಿರುವ ಹೆಣ್ಣು ಕಣ್ಣಿಗೆ ಬೀಳದು. ಈ ದರಿದ್ರ ಸಮಾಜದಲ್ಲಿ ಹೆಣ್ಣುಗಳಿಗೆ ಬೆಳೆಯಲು ಅವಕಾಶ ಕೊಟ್ಟಾರೇ! ಎಳೆತನದಲ್ಲೇ ರಿಸರ್ವ್ಡ್. ಒಂದು ವೇಳೆ ಹಟತೊಟ್ಟು ನನ್ನಂತೆ ವಿವಾಹವಾಗದೇ ನಿಂತರೂ, ಅವರ ಸುತ್ತ ಅಣ್ಣ, ತಮ್ಮ, ಅಪ್ಪ, ಅಮ್ಮಂದಿರ ಮುಳ್ಳುಬೇಲಿ. ಇನ್ನು 'ವೂವಿಂಗ್', ರೊಮಾನ್ಸ್, ಮ್ಯೂಚುಯಲ್ ಸ್ಟಡಿ, ಅಂಡರ್‌ಸ್ಟಾಂಡಿಗೆಲ್ಲಿ ಅವಕಾಶ? ಶುದ್ಧ ಕಾಡುಜನದ ದೇಶ! ಈ ಜಂಗ್ಲೀ ಸಮಾಜ ಸುಧಾರಿಸೋದು ಎಂದಿಗೇ" ಹೀಗೆಂದು ವ್ಯಥೆ ಪಡುತ್ತಾ, ತಾನು ಊಹಿಸಿದ್ದ ನಲವತ್ತನೆಯ ವಯಸ್ಸಿನ ಪ್ರಾಯದ, ಯೌವನದ ಉತ್ಕರ್ಷ ಸ್ಥಿತಿಯು ಬರುವುದರ ಬದಲು ಮುಖದ ಮೇಲೆ ಸುಕ್ಕುಗಳು ಬಂದು, ಗಡ್ಡ ಮೀಸೆಯ ಕೂದಲೂ ತಲೆಗೂದಲೂ ಕಿವಿಯ ಬಳಿಯೂ ಮುಂದೆಲೆಯ ಮಧ್ಯದಲ್ಲೂ

ನರೆಯುತ್ತಿರುವುದನ್ನು ಕಂಡು ಬಹಳವಾಗಿ ನೊಂದ. "ಛೀ! ಛೀ! ಸೂರ್ಯನನ್ನು ಹುಡುಕಿಕೊಂಡು ದೇಶವೆಲ್ಲಾ ಪಶ್ಚಿಮಕ್ಕೇ ನಡೆದುಹೋಗುತ್ತಿರುವಾಗ ನಾನೊಬ್ಬ ಮಾತ್ರ ಇದೇ ಸರಿಯೆಂದು ಪಟ್ಟುಹಿಡಿದು ಪೂರ್ವಕ್ಕೆ ಹೋಗುವುದರಿಂದ ಒಂಟಿಯಾಗಿಯೇ ಜೀವನ ಯಾತ್ರೆಯನ್ನು ಮುಗಿಸಬೇಕಾಗುವುದೋ ಏನೋ" ಎಂದು ಬೆದರಿದ.

ಆದರೆ ಈ ವೇಳೆಗೆ ಅವನ ಅದೃಷ್ಟಕ್ಕೆ ಇನ್ಸ್ಟಿಟ್ಯೂಟ್‌ಗೆ ಡಾಕ್ಟರ್ ಮಿಸ್ ಕೋಮಲಾ ಎಂಬಾಕೆ ಮೆಂಬರಾದರು. ಅರವಿಂದನು ಮಹದಾನಂದದಿಂದ ಅವರ ಪೂರ್ವೇತಿಹಾಸಗಳನ್ನು ವಿಚಾರಿಸಿ, ಅವರು ಅವಿವಾಹಿತರೆಂದೂ, ಸ್ಟೇಟ್ ಮೆಡಿಕಲ್ ಸರ್ವಿಸ್‌ನಲ್ಲಿರುವರೆಂದೂ, ಅವರಿಗೆ ತಾಯಿತಂದೆಗಳು ಯಾರೂ ಇಲ್ಲವೆಂದು ತಿಳಿಯುವ ವೇಳೆಗೆ, ಆಗಲೇ ಇವನ ಗೆಳೆಯರನೇಕರು ಆಕೆಯ ಪರಿಚಯ ಮಾಡಿಕೊಂಡು, ಆಕೆಯನ್ನು ಟೀಗೆ ಕರೆದು ಹೋಗಿ ಬಂದಿದ್ದರು. ಇವರ ಪೈಕಿಯ ಹೆಚ್ಚು ಮಂದಿ ವಿವಾಹಿತರೇ. ಈ ಬಗೆಯಾದ ಪೈಪೋಟಿಯನ್ನು ನೋಡಿ ಅರವಿಂದನಿಗೆ ಅವರ ಮೇಲೆ ಗೆಳೆತನದ ಸ್ನೇಹಕ್ಕೆ ಬದಲಾಗಿ ರೋಷ ಹೆಚ್ಚಿತು. "ಹೆಂಡತಿ ಮಕ್ಕಳನ್ನು ಕಟ್ಟಿಕೊಂಡಿರುವವರಿಗೂ ಈ ಹೆಣ್ಣುಗಳ ವಿಚಾರದಲ್ಲಿ ಈ ದಾಹವೇಕೆ? ಇದು ಬಹಳ ಅನ್ಯಾಯ" ಎಂದು ರೋಷಕಾರಿದ. ಆದರೆ ಇವನ ರೋಷವನ್ನೂ, ಕೋಪವನ್ನೂ ಕೇಳುವವರು ಯಾರು! ಕಡೆಗೆ ತಡೆಯಲಾರದೆ ಅವರ ಪೈಕಿ ಕೆಲವರೊಂದಿಗೆ ಪ್ರಶ್ನಿಸಿದಾಗ "ಹೋಗಯ್ಯಾ ಹುಚ್ಚಪ್ಪಾ!.... ಆಕಾಶ ನೋಡೋಕೆ ನೂಕುನುಗ್ಗಲೇ! ಯಾವುದೋ ಹೆಣ್ಣಾನ್ನ ಮಾತಾಡಿಸೋದಕ್ಕೆ ನಿಂದೇನು ಅಡ್ಡಿ." ಎಂದು ಜರೆದರು. ಮಿಕ್ಕವರು "ನಿನಗೆ ಯೋಗ್ಯತೆ ಇದ್ದರೆ ನೀನೇ ಆಕೇನ ಮದುವೆಯಾಗು. ಆಮೇಲೂ, ನಮ್ಮನ್ನಲ್ಲ ....ಅವಳನ್ನೆ ಚೆಕ್ ಮಾಡಿಕೋ ಹೋಗಯ್ಯಾ" ಎಂದು ಬಾಯಿ ಬಡಿದರು. ಅರವಿಂದನು ಸಿಡಿದ, ಸಿಟ್ಟಾದ, ನೊಂದ, ಪಶ್ಚಾತ್ತಾಪಪಟ್ಟ. "ಈ ಮಿಸ್ ಕೋಮಲನಿಗೆ ಸುಮಾರು ಇಪ್ಪತ್ತೈದು ವರುಷವಾಗಿರಬೇಕು ತನಗೆ ಮೂವತ್ತೆರಡನೆಯ ವರುಷ, ಚಿಂತೆಯಿಲ್ಲ. ಮಿಕ್ಕ ಕ್ವಾಲಿಫಿಕೇಷನ್ಸ್, ಟೇಸ್ಟ್ಸ್, ಟೆಂಪರಮೆಂಟ್ಸ್, ಯಾವುದು ಸರಿಸಮಾನವಾಗಿಲ್ಲದಿದ್ದರೂ ಚಿಂತೆಯಿಲ್ಲ. ಸದ್ಯಕ್ಕೆ ಅವಳು ನನ್ನ ಪ್ರಪೋಸಲ್‌ಗೆ ಒಪ್ಪಿದರೆ ಸಾಕು"

ಎಂದುಕೊಂಡು, ಅವಳೊಂದಿಗೆ ಹೆಚ್ಚು ಸಲಿಗೆಯಿಂದಿದ್ದ ತನ್ನ ಅವಿವಾಹಿತ ಗೆಳೆಯನೊಬ್ಬನಿಗೆ ತನ್ನಿಷ್ಟವನ್ನು ತಿಳಿಸಿದ. ಆತನು ಇವನ ಉತ್ಸಾಹಕ್ಕೆ ಸಹಾಯ ಮಾಡುವುದು ಹಾಗಿರಲಿ, ಅದಕ್ಕೆ ಪ್ರತಿಯಾಗಿ "ಅರವಿಂದಾ! ನಿನ್ನ ಹುಚ್ಚಿಗೆ ನಾನು ಏನು ಹೇಳಲಿ? ಅಲ್ಲವಯ್ಯಾ! ದೇಶವಲ್ಲ, ಜಾತಿಯಲ್ಲ, ಗೋತ್ರವಲ್ಲ. ಯಾವ್ರೋಳೋ ಏನೋ! ಅಪ್ಪ ಯಾರೋ, ಅಮ್ಮ ಯಾರೋ! ವಂಶ ಯಾವುದೋ! ಆರೋಗ್ಯವಂತಳೋ! ರೋಗಿಷ್ಠಳೋ! ಒಳ್ಳೆಯವಳೋ, ಅಲ್ಲ ಶೂರ್ಪನಖಿಯೋ! ಕಂಡವರು ಯಾರು? . . . . . . ವಸಂತರಾಯರ ಮಗನಾದ ನೀನು ಇವಳನ್ನ ಹಿಂದು ಮುಂದೆ ನೋಡದೆ ಮದುವೆ ಮಾಡಿಕೊಂಡು ವಂಶೋದ್ಧಾರ ಮಾಡುತೀಯಾ?" ಎಂದು ಮೂದಲಿಸಿದ. ಅರವಿಂದನು ಸಿಟ್ಟಾಗಿ "ಎಂಥಾ ದ್ರೋಹಿಗಳಿರೋ ನೀವು? ಮನೇಲಿ ಹೆಂಡತಿ ಮಕ್ಕಳನ್ನಿಟ್ಟು ಕೊಂಡೂ ಕೂಡಾ, ನೀವು ಇಂಥಾದಕ್ಕೆ ಪಾಲಿಗೆ ಬಂದು ತೊಂದರೆ ಮಾಡುತೀರೇ ಹೊರತು, ಸಹಾಯ ಮಾಡೋ ಮನಸ್ಸಿಲ್ಲವಲ್ಲಾ!" ಎಂದು ಗದರಿಸಿದ. ಅದಕ್ಕೆ ಆತ "ಅಲ್ಲವೋ ಬೇಕೂಫಾ! ಇವಳು ಅವಿವಾಹಿತ ಕನ್ಯೇಂತ ನಿನಗೇನು ಗೊತ್ತೋ? ಅವಳ ಮಾತು ಕತೆ ನೋಡಿದರೆ ಪ್ರಪಂಚ ನೋಡಿದೋಳ ಹಾಗೆ ಕಾಣುತ್ತಾಳೆ! . . . . ಅಂಥ . . . . ಎಷ್ಟನೇ ಹ್ಯಾಂಡ್ನೋ ಕಟ್ಟಿಕೊಳ್ಳೋ ಅಂಥ ಪಾಪ ಮಾಡಿದ್ದೀಯೇನೋ ಅರವಿಂದ? . . . . ಐ ಪಿಟಿ ಯು. ಇವೆಲ್ಲಾ ಸುಮ್ಮನೇ ಕ್ಲಬ್‌ನಲ್ಲಿ ಆಡಿಸೋದಕ್ಕೆ ಯೋಗ್ಯವೇ ಹೊರತು, ಸಂಸಾರಕ್ಕಲ್ಲಕಾಣೋ" ಎಂದು ಹೇಳಿ ವಿಮುಖನಾದ.

ಕಡೆಗೆ ಅರವಿಂದನು ತಾನೇ ಹೇಗಾದರೂ ಮಾಡಿ ತನ್ನ ಸುನೆಗೆ ಟೀಪಾರ್ಟಿಗೆ ಬರಹೇಳಬೇಕೆಂದು ತೀರ್ಮಾನಿಸಿದ. ಆದರೆ ಆಕೆಯೊಬ್ಬಳನ್ನೇ ಬರಹೇಳುವಂತಿಲ್ಲ. ಕೆಲವಾರು ಸ್ನೇಹಿತರಿಗೂ ಆಹ್ವಾನ ನೀಡಬೇಕು. ಅಲ್ಲದೆ ಮನೆಯಲ್ಲಿ ಅಶೋಕನನ್ನೂ ಒಂದು ಮಾತು ಕೇಳಬೇಕು; ಕೇಳುವುದೇನೂ, ಹೇಳಬೇಕು.

ಅಂತೂ ಶನಿವಾರದ ದಿವಸ ಸಂಜೆ ನಾಲ್ಕು ಗಂಟೆಗೆ ತನ್ನ ಮಹಡಿಯ ಹಾಲಿನಲ್ಲಿ ಟೀ ಪಾರ್ಟಿಯ ಏರ್ಪಾಟು ಮಾಡಿದ. ಡಾ|| ಮಿಸ್ ಕೋಮಲ-ಚೀಫ್ ಗೆಸ್ಟರ ಜೊತೆಗೆ ನಾಲ್ವರು ಲಾಯರ್ ಫ್ರೆಂಡ್ಸ್, ಇನ್ಸ್ಟಿಟ್ಯೂಟ್‌ನ

ಹೊಸ ಸೆಕ್ರೆಟರಿ ರಘುನಾಥರಾಯರೂ, ಅವರ ಮಿಸೆಸ್, ಇಷ್ಟು ಜನ ಆಹ್ವಾನಿತರಾಗಿದ್ದರು. ಅನಾಹ್ವಾನಿತನಾಗಿ ಬಾಲಕೃಷ್ಣ ಉರುಫ್ ಮುಕುಂದ ಉರುಫ್ "ಪುಟ್ಟ" ಎಲ್ಲರಿಗಿಂತ ಮೊದಲೇ ಸಿದ್ಧವಾಗಿದ್ದ. ಅರವಿಂದನ ಮನಸ್ಸಿನ ಆಶಾಕಾಂಕ್ಷೆಗಳನ್ನು ಚೆನ್ನಾಗಿ ಅರಿತ ಅಶೋಕನು ಕಾಲೇಜಿಗೆ ರಜವಿದ್ದ ಕಾರಣ ತಾನೇ ಸ್ವಯಂ ಬೆಳಗಿನಿಂದ ಸಮಸ್ತ ಏರ್ಪಾಟುಗಳನ್ನೂ ಮಾಡಿಸಿ, ಮೈಸೂರ್ ಪಾಕ್, ಜಾಂಗ್ರಿ, ಬೋಂಡ, ಪಕೋಡ, ಕಾಫೀ, ಬಾದಾಮಿ ಹಾಲುಗಳನ್ನು ಸಿದ್ಧಮಾಡಿಸಿದ್ದ. ಲಾಯರ್ ಫ್ರೆಂಡ್ಸ್ ಏನೋ ಮೂರೂವರೆ ಗಂಟೆಗೇನೇ ಬಂದರು. ಅವರ ಪೈಕಿ ಇಬ್ಬರು ಗ್ರಾಮಾಫೋನ್ ರಿಕಾರ್ಡ್ ಹಚ್ಚುತ್ತಿದ್ದರು. ನಾಲ್ಕು ಗಂಟೆಗೆ ಸರಿಯಾಗಿ ಚೀಫ್ ಗೆಸ್ಟ್ ಡಾಕ್ಟರ್ ಮಿಸ್ ಕೋಮಲಾ ಬಂದಳು. ಎಡಕ್ಕೆ ಬೈತಲೆ ತೆಗೆದುಕೊಂಡು ಹಸರು ಜಾರ್ಜೆಟ್ ಸೀರೆಯುಟ್ಟು, ಅಲಂಕಾರ ಮಾಡಿಕೊಂಡು ಲಕ್ಷಣವಾಗಿ ಕಾಣುತ್ತಿದ್ದರೂ, ಆಕೆಯು ಏನೋ ಹೇಳಿಕೊಳ್ಳಲಾರದ ಸಂಕಟದಲ್ಲಿರುವಂತೆ ಮುಖವು ಬಾಡಿತ್ತು. ಅರವಿಂದನು ಆಕೆಯನ್ನು ಸೋದರನಾದ ಅಶೋಕನಿಗೆ ಪರಿಚಯ ಮಾಡಿಸಿಕೊಟ್ಟು ಅಪೂರ್ವ ವಿಶ್ವಾಸ ದಿಂದ ಮೇಲಕ್ಕೆ ಕರೆದುಕೊಂಡು ಹೋಗಿ ಕೂಡಿಸಿದ. ನಾಲ್ಕು ಗಂಟೆ ಐದು ನಿಮಿಷಕ್ಕೆ ಸರಿಯಾಗಿ ಸೆಕ್ರೆಟರಿ ರಘುನಾಥರಾಯನೂ ತನ್ನ ಪತ್ನಿಯೊಂದಿಗೆ ಬಂದ. ರಘುನಾಥರಾಯನಿಗೂ ಸುಮಾರು ಮೂವತ್ತೈದು ವರುಷವಿರ ಬಹುದು. ಅವನ ಹೆಂಡತಿ ಹದಿನೆಂಟು ವರುಷದ ನವತರುಣಿಯಂತೆ ಕಳೆ ಕಳೆಯಾಗಿದ್ದಳು. ಅವಳ ಮುಖವನ್ನು ನೋಡುತ್ತಲೇ ಅರವಿಂದನು ಬೆಚ್ಚಿದ. "ಎಷ್ಟು ಸುಂದರವಾದ ಹೆಣ್ಣು!" ಎಂದುಕೊಳ್ಳುತ್ತಿದ್ದಂತೆಯೇ ಅವಳು "ಪರಸ್ತ್ರೀ" ಎಂಬ ತಿಳಿವಳಿಕೆ ಬಂದು ಕಣ್ಣು ತಗ್ಗಿದರೂ ಮನಸ್ಸು ಕೇಳದೆ ಮತ್ತೊಮ್ಮೆ ಅವಳನ್ನು ನೋಡುತ್ತಿದ್ದಂತೆಯೇ "ಎಂಟು ವರುಷಗಳ ಕೆಳಗೆ ನಾನು ನೋಡಿದ್ದ ಎಂಟು ಫೋಟೋಗಳ ಪೈಕಿ ಒಂದರಲ್ಲಿದ್ದ 'ಸುಮತಿ ಬಿ. ಎ.' ಇವಳೇ ಇರಬೇಕು" ಎಂದುಕೊಂಡ. "ಮದುವೆಯಾಗಿ ಸಂಸಾರಕ್ಕೆ ಬಿದ್ದಮೇಲೂ ಹೆಣ್ಣು ಇಷ್ಟು ಕಳೆಯಾಗಿರಲು ಸಾಧ್ಯವೇ ? . . . ಹಾಗಾದರೆ ಅವಿವಾಹಿತಳಾದ ಡಾಕ್ಟರ್ ಮಿಸ್ ಕೋಮಲ ಇವಳ ಮುಂದೆ ಸಪ್ಪೆಯಾಗಿ ಕಾಣುತ್ತಾಳಲ್ಲ. ಇವಳೇ ಸುಮತಿಯಾಗಿದ್ದರೆ ನನ್ನಂಥ ನತದೃಷ್ಟ ಬೇರೊಬ್ಬ

ನಿಲ್ಲ. ಆಗ ಎಳೆಯ ಹುಡುಗಿಯಾಗಿ ಕಾಣಿಸುತ್ತಿದ್ದಳು — ಈಗ ಎಂಥ ತುಂಬು ಜವ್ವನದ ಹೆಣ್ಣು! ನಮ್ಮ ಸೆಕ್ರೆಟರಿ ನಿಜವಾಗಿಯೂ ಭಾಗ್ಯಶಾಲಿ." ಎಂದು ಯೋಚನಾ ತರಂಗಗಳು ಮಿಂಚಿನಂತೆ ಅವನ ಮನಸ್ಸಿನಲ್ಲಿ ಹೊಳೆದು ಅಳಿಯುವುದರೊಳಗಾಗಿ ರಘುನಾಥರಾಯನು "ಮಿಸ್ಟರ್ ಅರವಿಂದ್! ಮೀಟ್ ಮೈ ವೈಫ್ ಶ್ರೀಮತಿ ಸುಮತಿ ಬಿ.ಎ.," ಎಂದುಬಿಟ್ಟ. ಅರವಿಂದನು ಆಕೆಗೆ ಕೈಮುಗಿಯುತ್ತಿರುವಂತೆಯೇ ಬೆವತು, ಅವರನ್ನು ಒಳಕ್ಕೆ ಬರಹೇಳುತ್ತಾ ಮೇಲೋಡಿದ.

ಅಂದಿನ ಪಾರ್ಟಿ 'ಪುಟ್ಟು'ಗೆ ಬಹು ಸ್ವಾರಸ್ಯವಾಗಿದ್ದಿತು. ಅಶೋಕನು ಉತ್ಸಾಹದಿಂದ ಓಡಾಡುತ್ತಿದ್ದ. ಅರವಿಂದನ ಮನಸ್ಸು ಕಲಕಿಹೋಗಿತ್ತು. ಅಂತೂ ಮುಗಿಯಿತು. ಡಾಕ್ಟರ್ ಮಿಸ್ ಕೋಮಲಾ ಬಹು ಹೊತ್ತು ನಿಲ್ಲಲಿಲ್ಲ. ಐದು ಗಂಟೆಗೆ ಬೇರೆ 'ಎಂಗೇಜ್‌ಮೆಂಟ್' ಇರುವುದೆಂದು ಹೇಳಿ ಹೊರಟುಹೋದಳು.

ಅಂದು ಸಂಜೆ ಇನ್ಸ್ಟಿಟ್ಯೂಟ್‌ನಲ್ಲಿ ಭೇಟಿಯಾದಾಗ ಅರವಿಂದನು ಆಕೆಗೊಂದು ಕಾಗದ ಕೊಟ್ಟು ಹೋದ. ಪತ್ರವನ್ನೊಡೆದು ನೋಡಿಕೊಂಡ ಅವಳು, ನೇರವಾಗಿ ಇವನು ಕುಳಿತಿದ್ದ ರೂಮಿನ ಬಳಿಗೆ ಬಂದು 'ಬಾಯ್' ಕೈಲಿ ಚೀಟಿ ಕಳುಹಿಸಿದಳು. ಅದನ್ನು ನೋಡಿಕೊಂಡ ಅರವಿಂದ ಸರ್ರನೆ ಹೊರಗೆ ಬಂದ. ಮಿಸ್ ಕೋಮಲ ನೇರವಾಗಿ ಅವನನ್ನು ದಿಟ್ಟಿಸಿ ನೋಡಿ "ನೀವು ಈ ರೀತಿ ಪತ್ರ ಬರೆಯುವುದು ಸರಿಯಲ್ಲ. ಇಂಥ ವಿಚಾರಗಳನ್ನ ಪ್ರತ್ಯೇಕವಾಗಿ ಬಾಯಲ್ಲೇ ಆಡಿ, ಕೇಳಿ, ತಿಳಿದುಕೊಂಡುಬಿಡಬೇಕು. ಇಂಥ ಪತ್ರವ್ಯವಹಾರದಿಂದ ಇಬ್ಬರಿಗೂ ತೊಂದರೆ" ಎಂದು ಹೇಳಿ ಅವನು ಬರೆದಿದ್ದ ಕಾಗದವನ್ನು ಹಿಂದಿರುಗಿ ಕೊಟ್ಟುಬಿಟ್ಟು, 'ಹೊರಕ್ಕೆ ಬನ್ನಿ, ಬೇಕಾದರೆ ಮಾತನಾಡೋಣ' ಎಂದು ಹೇಳಿದಳು. ಅರವಿಂದನು ಒಪ್ಪಿ ಅವಳನ್ನು ಹಿಂಬಾಲಿಸಿದ. ನೇರವಾಗಿ ಹೊರಟು ಕಾಂಪೌಂಡಿನ ಪಶ್ಚಿಮ ಭಾಗದಲ್ಲಿದ್ದ ಹೂವರ್ಚಿಮರಗಳ ಕೆಳಗಡೆ ಹಾಕಿದ್ದ ಕಲ್ಲುಬೆಂಚುಗಳ ಮೇಲಕ್ಕೆ ಬಂದು ಕುಳಿತರು. ಮಿಸ್ ಕೋಮಲಾ ಅರವಿಂದನನ್ನು ಕುರಿತು "ನೀವು ಯೂರೋಪಿಯನ್ ಪದ್ಧತಿಯಂತೆ 'ವೂ' ಮಾಡಿ, ನಂತರ ಮದುವೆಯಾಗಬೇಕೆಂದಿದ್ದೀರೆಂದು ನಿಮ್ಮ ಸ್ನೇಹಿತರೊಬ್ಬರಿಂದ ಕೇಳಿ ತಿಳಿದುಕೊಂಡಿದ್ದೆ. ಆದರೆ ಈಗ

ನಿಮ್ಮ ಪತ್ರವನ್ನು ನೋಡಿ ನನಗೆ ಆಶ್ಚರ್ಯವಾಗಿದೆ. ವೆಸ್ಟರ್ನ್ ಕಂಟ್ರೀಸ್ ನಲ್ಲಿ ಒಬ್ಬ ಗಂಡಸು ಒಬ್ಬಳು ಹೆಂಗಸನ್ನ ನೋಡಿ ಪರಸ್ಪರ ಆಕರ್ಷಿಸಲ್ಪಟ್ಟರೆ "ನಿನ್ನ ವಯಸ್ಸೇನು? ನಿಮ್ಮ ತಂದೆಯಾರು?.... ನಿನಗೆ ಮದುವೆಯಾಗಿದೆಯೆ? ನಿನ್ನ ಗಂಡ ಇದ್ದಾನೆಯೇ?.... ಅವನು ನಿನ್ನ ಬಿಟ್ಟುಕೊಟ್ಟಾನೇ?" ಈ ಪ್ರಶ್ನೆಗಳೇ ಏಳೊಲ್ಲ—ಒಬ್ಬರನ್ನೊಬ್ಬರು ವಿಚಾರಿಸೋದೂ ಇಲ್ಲ. ಹಾಗೆ ವಿಚಾರಿಸಿದರೆ ಅದು ರಿಯಲ್ ಲವ್ವ್ವಲ್ಲ. ನಾನೂ ಒಬ್ಬ ಸೇಠ್‌ನ ಫ್ಯಾಮಿಲೀ ಡಾಕ್ಟರಾಗಿ ಯೂರೋಪ್ ಸುತ್ತಿಕೊಂಡು ಬಂದಿದ್ದೇನೆ. ನಿಮ್ಮಹಾಗೆ ಅಲ್ಲಿ ಪ್ರಶ್ನೆ ಕೇಳಿದರೆ, ಕಾಗದ ಬರೆದರೆ 'ಬ್ರೂಟ್' ಅಂತ ಒದ್ದುಬಿಡುತ್ತಾರೆ. ಅದು ಬಹಳ ಅಪಮಾನ. ರಿಯಲ್, ನ್ಯಾಚುರಲ್ ಲವ್ ಇದ್ದರೆ ಅದಕ್ಕೆ ಕಂಡಿಷನ್ಸ್ ಇರುತ್ತೇನ್ರೀ? ನೀವು ಇಲ್ಲಿ ಕೂತುಕೊಂಡು ವಿಲಾಯತೀ 'ಕ್ರಮಾನ ಕಲ್ಪನೆ ಮಾಡಿಕೋಬೇಡಿ' ಒನ್ ಮ್ಯಾನ್ಸ್ ಫುಡ್ ಈಸ್ ಅನದರ್ ಮ್ಯಾನ್ಸ್ ಪಾಯಿಸನ್. ನಿಮ್ಮ ಕಾಗದ ನೋಡಿದರೆ, ನೀವು ಯಾವುದಾದರೂ ಕಂಡೂ ಕೇಳಿದ ಹತ್ತಿರದವಳೇ ಹೆಣ್ಣಿನ್ನ ಮದುವೆಯಾಗೋದು ಕ್ಷೇಮಾಂತ ಕಾಣುತ್ತೆ. ಕಾಗದದಲ್ಲಿ 'ನಿಮ್ಮನ್ನ ನೋಡಿ ನನ್ನ ಮನಸ್ಸು ಕಲಕಿಹೋಗಿದೇ'ಂತೀರಿ. ಮುಂದಿನ ಸಾಲಿನಲ್ಲೇ 'ಹೀಗೆ ಬರೀಬಹುದೋ, ಬಾರದೋಂ'ತೀರಿ; ಮುಂದೆ 'ನಾನು ನೀವು ಒಂದು ವೇಳೆ ಮದುವೆಯಾದರೇ'ಂತೀರಿ —ಮತ್ತೆ 'ನಿಮಗೆ ಮದುವೆಯಾಗಿದೆಯೋ'ಂತ? ಕೇಳುತೀರಿ. ಇದೆಲ್ಲಾದರೂ ಹೋಗ್ಲೀಂದರೆ, ನಿಮ್ಮ ತಂದೆಯಾರು? .... ಅಣ್ಣ ತಮ್ಮ ಇದಾರೆಯೇಂತ ಕೇಳುತೀರಿ .... ಐ ಆಮ್ ವೆರಿಸಾರಿ ಫಾರ್‌ಯು .... ಹೀಗೆ ಇನ್ನ ಯಾರಿಗಾದರೂ ಬರೆದೀರೀ. ಇದು ಡ್ಯಾಮ್ ಇನ್‌ಸಲ್ಟಿಂಗ್. ಒಂದುವೇಳೆ ಒಬ್ಬಳಿಗೆ ಮದುವೆಯಾಗಿ ಗಂಡ ಇದ್ದರೆ ತಾನೇ ಏನೂ, ಬೇರೊಬ್ಬನಲ್ಲಿ ಮ್ಯೂಚುಯಲ್ ಲವ್ ಒದಗಿ ಬಂದರೇ ತೀರಿತು. ಆ ಗಂಡನಿಗೆ ಒಂದು ಮಾತು ಹೇಳಿಬಿಟ್ಟರಾಯಿತು; ಕೈಬಿಟ್ಟರಾಯಿತು. ಇದು ನಿಜವಾದ ಪ್ರೇಮ .... ಹೇಳಿ ಕೇಳಿ ಚೌಕಾಸೀಮಾಡೋದಲ್ಲ. ತಿಳೀತೇ!" ಎಂದು ಇನ್ನೂ ಏನೇನೋ ಹೇಳುವುದರಲ್ಲಿದ್ದಳು. ಅಷ್ಟುದ್ದಕ್ಕೂ ಅರವಿಂದನು "ಐ ಆಮ್ ಸಾರೀ .... ಎಕ್ಸ್‌ಕ್ಯೂಸ್ ಮಿ" ಅಂತಾನೇ ಇದ್ದ. ಕಡೆಗೆ ಅಲ್ಲಿ ಇನ್ನು ಕೂಡುವುದು ತರವಲ್ಲವೆಂದು ಮೇಲೆದ್ದ. ಆದರೆ ಮಿಸ್ ಕೋಮಲಾ ಅವನ ಕೈಹಿಡಿದು" ಕೂತು

ಕೊಳ್ಳಿ ! ಹೇಳಬೇಕಾದದ್ದು ಇನ್ನೂ ಇದೆ "ಎಂದು ಕೂಡಿಸಿದಳು. "ಕೋಮಲ ಕೈಗಳು ಸೋಕುತ್ತಲೇ ರೋಮಾಂಚವಾಗಬೇಕಾದದ್ದು, ಉಪಾಧ್ಯಾಯರು ಹಿಡಿದು ಜಗ್ಗಿಸಿದಂತಾಯಿತಲ್ಲಾ" ಎಂದುಕೊಂಡು ಕೂತ. "ನೋಡಿ ಮಿಸ್ಟರ್ ಅರವಿಂದ್ ! ನಾನು ಬಂದ ದಿವಸದಿಂದ ನೀವು ಬಹು ಸಂಕೋಚ ದಿಂದ ದೂರ ದೂರವೇ ಓಡಾಡುತಿರೋದನ್ನ ನೋಡಿ ಒಳಗೇ ನಗುತಿದ್ದೆ; ಯು ಆರ್ ಎ ಬಿಗ್ ಛೈಲ್ಡ್ .... ಹಹ್ಹಾ ! ನೀವು "ವೂ" ಮಾಡುತೀನೀಂತ ಕಾಗದ ಬರೆಕೊಟ್ಟು ಪ್ರಾರಂಭ ಮಾಡಬೇಕೇ ? ಇಲ್ಲಾ ಒಬ್ಬರಿಗೊಬ್ಬರು "ಐ ಲವ್ ಯು" ಅಂತ ಪತ್ರ ಬರೆಕೊಟ್ಟು ಲವ್‌ಮಾಡಬೇಕೇ. "ನಿಮಗೆ ನನ್ನ ವಿಚಾರದಲ್ಲಿ ಸಹಜವಾದ ಪ್ರೇಮವಿದ್ದರೆ ತೀರಿತು-ದೇವರೇ ತಡೆದರೂ ಸಾಧ್ಯ ವಾಗೊಲ್ಲ. ಇನ್ನೂ ಬೇರೆ ತಂದೆ, ಗಂಡ, ಇವರು ಏನು ಮಾಡಿಯಾರು? ನನ್ನ ಹಿಸ್ಟರಿ ಜಿಯಾಗ್ರಫಿ ಕೇಳಿ ನೀವು ನನಗೋಸ್ಕರ ನಿಮ್ಮ "ವೂ" ಯಿಂಗ್ ಪ್ರಾರಂಭಿಸಬೇಡಿ. ನಿಮಗೆ ನನ್ನ ಮೇಲೆ ನಿಜವಾದ ಪ್ರೇಮವಿದ್ದರೆ ಹಾಗಂತ ಬಾಯಲ್ಲಿ ಹೇಳಿಬಿಡಿ ಸಾಕು. ನನಗೂ ನಿಮ್ಮ ಮೇಲೆ ಪ್ರೇಮ ವಿದ್ದರೆ, ನಿಮ್ಮ ಸಂಗಡ ಇರೋದಕ್ಕೆ ಪ್ರಯತ್ನಪಡುತ್ತೇನೆ" ಎಂದು ಹೇಳಿ ಕಣ್ಣು ಮಿಟುಕಿಸಿದಳು. ಅರವಿಂದನ ಅಂತಃಕರಣ ಕಲ್ಲಾಗಿದ್ದಂತೆ ಕಂಡು ಬಂದಿತು. ಎಲ್ಲೋ ಏನೋ ಮಹಾ ಅವಿವೇಕವಾಗಿರುವಂತೆ ಕಂಡು ಬಂದಿತು. ಮಿಸ್ ಕೋಮಲಾ ಹೇಳಿದ ಮಾತುಗಳಲ್ಲಿ ಅವನಿಗೆ ಯಾವ ಬಗೆಯಾದ 'ಕಲರ್‌ಫುಲ್ ರೊಮಾನ್ಸ್'' ಊ ಕಾಣಿಸಲಿಲ್ಲ. ಅದಕ್ಕೆ ಪ್ರತಿ ಯಾಗಿ ಸ್ವಲ್ಪ ಭಯವೇ ಆಯಿತು. 'ನಾಳೆ ನಾನಿವಳನ್ನು ಮದುವೆಯಾಗಿ, ಕೆಲವು ದಿವಸಗಳ ನಂತರ ಮತ್ತೊಬ್ಬನು ಇವಳನ್ನು ಬಯಸಿ, ಇವಳೂ 'ಹೂಂ' ಎಂದುಬಿಟ್ಟರೆ, ನನಗೇ ಹೇಳದೇ ಕೇಳದೇ ಅವನ ಹಿಂದೆ ಹೊರಟು ಹೋಗಿಬಿಡಬಹುದಲ್ಲಾ ! .... ಆ ಮೇಲೆ ನನ್ನಗತಿ ?, ಎಂದು ಕೊರಗಿದ. 'ಇವಳ ಮಾತುಗಳನ್ನು ಕೇಳಿದರೆ, ಇವಳು ಇತರರೊಂದಿಗೆ ಸರಾಗವಾಗಿ ಮಾತನಾಡುತ್ತಾ ನಕ್ಕು ಸರಸವಾಡುವುದನ್ನು ನೋಡಿದರೆ, ಇವಳು .... ಅವಿವಾಹಿತ .... ಕನ್ಯೆಯಾಗಿರಲಾರಳು .... ನಾನು ಯಾವ ಹೆಣ್ಣಿಗೂ ಎರಡನೇ ಮೂರನೇ ಗಂಡನಾಗಲು ಬಯಸುವುದಿಲ್ಲ .... ಆಜನ್ಮಪರ್ಯಂತ ಹೀಗೇ ಏಕಾಂಗಿಯಾಗಿದ್ದರೂ ಸರಿಯೇ" ಎಂದು ನಿರ್ಧರಿಸತೊಡಗಿದ

ಇವನು ಮಾತನಾಡದೇ ಕತ್ತು ತಗ್ಗಿಸಿರುವುದನ್ನು ಕಂಡು ಆಕೆಯು ಇವನ ಕಳ್ಳಂಗುಳಿಯಲ್ಲಿ ಕಚ್ಚಂಗುಳಿಯಿಟ್ಟು "ಏನ್ರೀಮಿಸ್ಟರ್ ಅರವಿಂದ್! ಹರೆಯದ ಹೆಣ್ಣು ಹಸೇಮೇಲೆ ಕೂತಹಾಗೆ ಹೀಗೆ ಕತ್ತುತಗ್ಗಿಸಿ ಮಾತ ನಾಡದೇ ಕೂತಿದ್ದೀರೀ ? ಇದೆಯೇನು 'ವೂ' ಯಿಂಗ್ ?" ಎಂದು ಪರಿಹಾಸ್ಯ ಮಾಡಿದಳು. ಅದಕ್ಕೆ ಅರವಿಂದನು "ಕ್ಷಮಿಸಿ ಮಿಸ್ ಕೋಮಲಾ ! ನಾನು 'ಬ್ರೂಟ್' ಹಾಗೆ ನಿಮಗೆ ಕಾಗದ ಬರೆದು ನಿಮ್ಮ ಮನಸ್ಸು ಕೆಡಿಸಿದೆ. ನಾನು ನಿಮಗೆ ಯೋಗ್ಯನಾದ, .... ಯೋಗ್ಯನಾದ ...." ಅನ್ನುತ್ತಿರುವಷ್ಟರಲ್ಲಿಯೇ ಆಕೆಯು "ಲವರ್ ಏನ್ರೀ ?" ಎಂದಳು. ಅರವಿಂದ ನಾಚಿದ. ಅದನ್ನು ಕಂಡ ಆಕೆ "ಒಳ್ಳೇಗರ್ಲ್ ಹಾಗೆ ಬ್ಲಷ್ ಆಗುತೀರಲ್ಲರೀ !" ಎಂದು ಅವನ ಕೆನ್ನೆಯನ್ನು ಜಿಗುಟಿದಳು. ಅರವಿಂದನ ಹಣೆ ಬೆವರಿತು. ಈ ಬಗೆಯ ಪ್ರಯೋಗ ಅವನ ಕಲ್ಪನೆಯಲ್ಲೂ ಇರಲಿಲ್ಲ. ಅನುಭವದಲ್ಲಂತೂ ಇರಲೇ ಇಲ್ಲ. ಆಕೆಯು ಅವನ ಅಂಗೈ ಹಿಡಿದು ತನ್ನ ಉಗುರುಗಳಿಂದ ಮೆದುವಾಗಿ ಕೆರೆಯುತ್ತಾ "ನೋಡೀ ಮಿಸ್ಟರ್ ಅರವಿಂದ್ ! ನೀವು ನಿಜವಾಗಿಯೂ ನನ್ನ ಮೇಲೆ ಅಷ್ಟೊಂದು ಲವ್ ಇಟ್ಟುಕೊಂಡಿರೋಪಕ್ಷಕ್ಕೆ ಐಹ್ಯಾವ್ ನೋ ಅಬ್ಜಕ್ಷನ್. ನಾನೂ ನೀವೂ ನಿಮ್ಮ ಮಹಡೀಲಿ ಒಟ್ಟಿಗೇ ರೂಮ್ ಮೇಟ್ಸ್ ಆಗಿರಬಹುದು" ಎಂದಳು. ಅರವಿಂದ ಬೆಚ್ಚಿದ. "ಮದುವೆಯಿಲ್ಲ-ಮುಂಜಿ ಯಿಲ್ಲ. ಯಾರಿಗೂ ಹೇಳದೇ ಕೇಳದೇ, ತಾಳೀಕಟ್ಟದೇ ಏಕದಂ ರೂಮ್ ಮೇಟ್ಸ್ !!" ಮತ್ತೆ ಹಣೆ ಬೆವರಿತು. ತಾನು ಗಂಡಸಾಗಿ ಈ ರೀತಿ 'ನರ್ವಸ್' ಆಗೋದು ಸರಿಯಲ್ಲವೆಂದು ತಿಳಿದು ಸ್ವಲ್ಪ ಧೈರ್ಯಮಾಡಿ ಕೊಂಡು "ಮಿಸ್ ಕೋಮಲಾ ! ನಾವು ಆದಷ್ಟು ಬೇಗ ಮದುವೆ ಯಾಗೋಣ ? ನಂತರ ಗೃಹಪ್ರವೇಶ ಮಾಡೋಣ" ಎಂದ. ಆಕೆ ಜುಗುಪ್ಸೆ ಯಿಂದ "ಓ ! ನೀವು ಮ್ಯಾರೇಜ್ ಹೆಸರಿನಲ್ಲಿ ನನ್ನ ನಿಮ್ಮ 'ಸ್ಲೇವ್' ಆಗಿ ಮಾಡಿಕೋಬೇಕೂಂತಾಲೇ !! ಇಂಪಾಸಿಬಲ್ .... ಅಲ್ರೀ ! ನಮ್ಮ ನಿಮ್ಮ ಲವ್‌ಗೆ ಊರಿನೋರ ಸಾಕ್ಷಿಏನ್ರೀ .... ಚೆನ್ನಾಗಿದೆ ! ನಿಮ್ಮಂಥೋರು ಇಂಗ್ಲೆಂಡಿನಲ್ಲಿ ಹುಟ್ಟಲಿಲ್ಲವಲ್ಲ, ಸದ್ಯ" ಎಂದು ಮೂದಲಿಸಿದಳು. ಅರವಿಂದನು ನೊಂದು "ಕ್ಷಮಿಸಿ, ಮಿಸ್ ಕೋಮಲಾ ! ನನಗೊಂದು ದಿನ ಟೈಮ್ ಕೊಡಿ. ನಾಳೆಯ ದಿನ ನನ್ನ ಫೈನಲ್ ವರ್ಡ್ ತಿಳಿಸುತ್ತೇನೆ" ಎಂದು ಎದ್ದ. ಆಕೆಯು

ತಟ್ಟನೆದ್ದು ಸಿಡಿದುಸಿಟ್ಟಾಗಿ "ಅಲ್ರೀ! 'ಬ್ರೂಟ್!' ನಾನು ನಿಮ್ಮಲ್ಲಿಗೆ ಬಂದು ನಿಮ್ಮ ಪ್ರೇಮಭಿಕ್ಷೆ ಬೇಡಿಕೊಂಡೆನೇನ್ರೀ-ನೀವು ನನಗೆ ಫೈನಲ್ ವರ್ಡ್ ಹೇಳೋಕೇ? ನೀವೇ ಬೇಡಿಕೊಂಡು ಆ ರೀತಿ ಕಾಗದ ಎಲ್ಲಾ ಬರೆದಿರೀ. ನೀವೇ ಪಾರ್ಟಿಗೆ ಕರೆದಿರೀ! ಯು ಆರ್ ನೈದರ್ ಎಜುಕೇಟೆಡ್ ನಾರ್ ಕಲ್ಚರ್ಡ್!" ಎಂದು ಧಿಕ್ಕರಿಸಿ ಹೊರಟುಹೋದಳು.

ಅರವಿಂದನು ಮತ್ತೆ ಇನ್ಸ್ಟಿಟ್ಯೂಟ್‌ನ ಒಳಕ್ಕೆ ಹೋಗಲಿಲ್ಲ. ನೇರವಾಗಿ ಮನೆಗೆ ಹಿಂದಿರುಗಿ ಬಂದು ಮಂಚದ ಮೇಲೆ ಮಲಗಿಬಿಟ್ಟ. ಮನಸ್ಸು ಬಹು ಗಲಿಬಿಲಿಯಾಗಿ ಬಿಟ್ಟಿತ್ತು. ತಾನೇನೋ ಬಹು ದೊಡ್ಡ ತಪ್ಪು ಮಾಡಿದವನಂತೆ ಭಾಸವಾಗುತ್ತಿತ್ತು, ಆದರೆ ತಪ್ಪೇನೆಂದು ತಿಳಿಯದು! "ಯಾವ ಹೆಣ್ಣಿಗಾದರೂ ಮೊದಲನೇ ಗಂಡನಾಗಬೇಕಾದರೆ ನಮ್ಮ ದೇಶದ ಪದ್ಧತಿಯೇ 'ಬೆಸ್ಟ್'-ಇಲ್ಲದುಂಬಿಯಂತೆ ವಿವಿಧ ಪುಷ್ಪಗಳ ರಸಾಸ್ವಾದನ ಮಾಡಬೇಕಾದರೆ .... ಅಲ್ಲ ಅಲ್ಲ; ಹೆಂಡತಿಯನ್ನು 'ನನ್ನ'ವಳೆಂದು ಹೇಳಿಕೊಳ್ಳುವ ಸಾಹಸ ಬೇಕಿಲ್ಲದಿದ್ದರೆ .... ಹಾಗೂಅಲ್ಲ .... ಶುದ್ಧವಾದ ದಾಂಪತ್ಯ ಜೀವನ ಬೇಡದೇಹೋದರೆ .... ಕೇವಲ ಹೆಣ್ಣುಗಳ ಸಹವಾಸ ಮಾತ್ರ ಬೇಕಾದರೆ....ಈ ಬಾಳು....ಏನೋ ತಲೆಕೆಡುತ್ತಿದೆ....ಸುಮತೀ!.... ಆಹಾ! ಎಷ್ಟು ಸುಂದರಿಯಾಗಿದ್ದಾಳೆ! ಎಷ್ಟು ಕಳೆಕಳೆಯಾಗಿದ್ದಾಳೆ!! ಇವಳು ಹೀಗಾಗುವಳೆಂದು ತಿಳಿದಿದ್ದರೆ ನಾನು ಸಾವಿರ ನಮಸ್ಕಾರ ಹಾಕಿ ಮದುವೆಮಾಡಿಕೊಳ್ಳುತ್ತಿದ್ದೆ ....ಈಗ ನನ್ನ ಭವಿಷ್ಯದ ಕನಸು ಕನಸಾಗಿಯೇ ನಿಂತಿತಲ್ಲಾ!!....ನನ್ನ ಹೆತ್ತಮ್ಮನ ಶಾಪವೋ!........ಓ ಮೈಗಾಡ್!! ಈಗಲೇ ಹೀಗೆ ಕೊರಗಿ ಕೊರಗಿ ಬಡವಾಗುತ್ತಿದೇನಲ್ಲಾ! ಇನ್ನು ನನ್ನ ನಲವತ್ತನೆಯ ವಯಸ್ಸಿಗೆ ಮದುವೆಗೇ ಅಯೋಗ್ಯನಾದೇನೇನೊ!!.... ವಿಲಾಯತಿಯಲ್ಲಿ .... ಮಿಸ್ ಕೋಮಲಾ ಹೇಳಿದಂತೆ .... ಗಂಡಹೆಂಡರೆನ್ನುವ ಪ್ರಶ್ನೆಯಿಲ್ಲ ...ಇದ್ದರೂ ಒಂದಲ್ಲ .... ಆದರೂ ಬಂಧನವಲ್ಲ.... ಈಗ ಮುಂದೆ ನನ್ನಗತಿ!" ಹೀಗೆ ಕೊರಗುತ್ತಿರುವ ವೇಳೆಗೆ ಹೊರಗಡೆ "ಅಪ್ಪಾ! ಅಪ್ಪಾ!!" ಎಂಬ ಪುಟ್ಟುವಿನ ಕೂಗು ಕೇಳಿಸಿತು. ಅನ್ನಪೂರ್ಣ ಕೆಳಗಡೆ ನಿಂತು ಮಗನ ಕೈಲಿ ಕೊಡುಬಳೆ ನೀರು ಕಳುಹಿಸಿದ್ದಾಳೆ. ಎದ್ದುಬಂದು ಬಾಗಿಲು ತೆಗೆದ ಅರವಿಂದನ ಮನಸ್ಸು ಕರಗಿಹೋಯಿತು. "ಛೀ! ಈ

ಮಗುವಿನ ಸರಳ ಪ್ರೇಮವೆಲ್ಲಿ ? .... ಕೋಮಲಳ ಕೃತ್ರಿಮ ಕಾಮವೆಲ್ಲಿ ?" ಎಂದುಕೊಂಡು "ಬನ್ನಿ ಮಿಸ್ಟರ್ ಬಾಲಕೃಷ್ಣರಾವ್!" ಎಂದು ಅವನನ್ನೆತ್ತಿಕೊಂಡು ಅಪ್ಪಿದ. ಅದಕ್ಕೆ ಪುಟ್ಟು "ರೀ ಅಪ್ಪಾ ! ನೀವು ಒಂದೊಂದು ದಿನ ಮುಂಕಾಗಿರುತೀರಿ-ಬಂದರೆ ಏನಾದರೂ ಕೊಟ್ಟು ಬೇಗ ಕಳಿಸಿಬಿಡುತೀರಿ ? ಒಂದೊಂದು ದಿವಸ ನಗುನಗುತಾ ಎತ್ತಿಕೊಂಡು ಮುದ್ದಾಡುತೀರಿ ಅಣ್ಣನ ಹಾಗೆ .... ಯಾಕ್ರೀ ಹಾಗೇ ?" ಎಂದ ಪ್ರಶ್ನಿಸಿದ. ಅರವಿಂದನು ಉತ್ತರವಾಗಿ ಅವನ ಬಾಯಿಗೊಂದು ಚಾಕೊಲೇಟ್ ಹಾಕಿ ಕೈಗೆರಡು ಬಿಸ್ಕತ್ತುಗಳನ್ನು ಕೊಟ್ಟು ಕಳುಹಿಸಿದ.

೬

ಮತ್ತೊಂದು ವರುಷ ಕಳೆದಿತ್ತು. ಅರವಿಂದನು ವರ್ತಮಾನ ಪತ್ರಿಕೆಗಳ ಮೂಲಕ ಪ್ರಕಟನೆಮಾಡಿಸಿ ನಾಲ್ಕಾರು ಹೆಂಗಸರ ಫೋಟೋಗಳನ್ನೂ ವಿಳಾಸಗಳನ್ನೂ ಸಂಪಾದಿಸಿದ್ದ. ಇವರ ಪೈಕಿ ಒಬ್ಬಳು ಬಾಲವಿಧವೆ, ಮತ್ತೊಬ್ಬಳು ಸಿಡುಬಿನ ಕಲೆಯುವಳು, ಇನ್ನೊಬ್ಬಳು ಬಹಳ ಕಪ್ಪು; ಹೀಗೆ ಅವರವರನ್ನು ಮೊತ್ತಾ ಕರೆಸಿ ನೋಡಿ ಕೈಬಿಟ್ಟದ್ದಾಯಿತು. ಇನ್‌ಸ್ಟಿಟ್ಯೂಟ್ ಕಡೆಗೆ ಹೋಗಿ ಒಂದು ವರುಷವೇ ಆಗಿತ್ತು. ಈಚೆಗೆ ಇವನ ಮಹಡಿಯೇ ಒಂದು ಕ್ಲಬ್‌ನಂತಿದ್ದು. ಗೊತ್ತಾದ ಮೂರು ನಾಲ್ಕು ಜನ 'ಗೆಳೆಯರು ಸೇರಿ ಅವಕಾಶವಾದಾಗಲೆಲ್ಲಾ 'ಇಸ್ಪೀಟ್' ಆಡುತ್ತಾ ಅರವಿಂದನು ಸಪ್ಲೈ ಮಾಡುತ್ತಿದ್ದ ಡಬ್ಬಗಟ್ಟಲೆ ಸಿಗರೇಟನ್ನು ಸೇದಿ ಊದಿ ಬೂದಿಮಾಡಿ ಹಾಕಿ ಹೋಗುತ್ತಿದ್ದರು. ಹೀಗೆಯೇ ತನ್ನ ಪಾಲಿನ ಆಸ್ತಿಯೂ ಕರಗುತ್ತಿರುವುದನ್ನು ಅರವಿಂದನು ಅರಿತ. "ಹೇಗಾದರೂ ಮಾಡಿ ತಾನೂ ಅಶೋಕನಂತೆ ಮದುವೆಯಾಗಿ ಗೃಹಸ್ಥನಾಗಬೇಕು. ಇನ್ನೆಷ್ಟು ದಿವಸ ಅವರಿಗೆ ಭಾರವಾಗಿರುವುದು" ಎಂದು ಚಿಂತಿಸುತ್ತಿದ್ದ. ಒಂದು ದಿನ ಇದ್ದಕ್ಕಿದ್ದಂತೆಯೇ ಇನ್‌ಸ್ಟಿಟ್ಯೂಟ್‌ನಿಂದ ಒಂದು ಪತ್ರ ಬಂದಿತು. ಒಡೆದು ನೋಡುವಲ್ಲಿ ರಿಟೈರಿಂಗ್ ಸೆಕ್ರೆಟರಿ ರಘುನಾಥರಾಯನು ಸದಸ್ಯರೆಲ್ಲರಿಗೂ 'ಡಿನ್ನರ್' ಏರ್ಪಡಿಸಿರುವರೆಂದೂ, ತಪ್ಪದೇ ಬರಬೇಕೆಂದೂ ಇತ್ತು. ಹೋಗದಿರುವುದು ಸರಿಯಲ್ಲವೆಂದು ತನ್ನ ಸದಸ್ಯತ್ವದ ಹಿಂದಿನ ಬಾಕಿಗಾಗಿ ಒಂದು ಚೆಕ್ ಕಳುಹಿಸಿ, ಬರುವುದಾಗಿ ಹೇಳಿ ಕಳುಹಿಸಿದ. ರಾತ್ರಿ ಎಂಟುಘಂಟೆಗೆ ಜರತಾರಿ ಪಂಚೆಯುಟ್ಟು

ರೇಷ್ಮೆ ಜುಬ್ಬವನ್ನು ತೊಟ್ಟು ಶಲ್ಯವನ್ನು ಹೊದ್ದು ಹೊರಟನು. ಕೂದಲು ನರೆತಿದ್ದರೂ ಅವನ ತಿಳುವಾದ ಕೆಂಚು ದೇಹಕ್ಕೂ ಅವನ ಬಟ್ಟೆಗೂ ಎಳಸಾಗಿ ಚೆಲುವಾಗಿ ಕಾಣುತ್ತಿದ್ದ.

ಅಂದು ಇನ್ಸ್ಟಿಟ್ಯೂಟ್‌ನಲ್ಲಿ ಸಮಸ್ತ ಸದಸ್ಯರೂ ನೆರೆದಿದ್ದರೂ. ಲೇಡಿ ಮೆಂಬರುಗಳನ್ನು ಸುಮತಿ ಸ್ವಾಗತಿಸುತ್ತಿದ್ದಳು. ಅವಳ ಪಕ್ಕದಲ್ಲಿ ಶುಭ್ರವಾದ ಜುಬ್ಬ ಸುರ್ವಾಲ್ ಧರಿಸಿದ ಮೂರುವರುಷದ ಸುಂದರ ಬಾಲಕನೊಬ್ಬನು ಬಂದವರಿಗೆಲ್ಲಾ ಸುಮತಿಯಂತೆ ಕೈ ಮುಗಿಯುತ್ತಿದ್ದ. ವಿಚಾರಿಸಲು ಅವನು ಸುಮತಿ ಮತ್ತು ಸೆಕ್ರೆಟರಿಯ ಮಗನೆಂದು ತಿಳಿಯಿತು. ಅರವಿಂದನಿಗೆ ಏನೇನೋ ಯೋಚನಾತರಂಗಗಳು ಹೊಳೆದು ನುಗ್ಗಿದುವು. ಅರವಿಂದನೂ ಅವನ ಗೆಳೆಯರೂ ಊಟಕ್ಕೆ ಕುಳಿತಿದ್ದ ಗೋಡೆಯ ಪಕ್ಕದ ಸಾಲಾದ ಮೇಲೆ, ಮೂರು ಸಾಲು ಗಂಡಸರು–ನಂತರ ಎದುರುಗೋಡೆಯ ಪಕ್ಕದಲ್ಲಿ, ಇವರಿಗೆ ಅಭಿಮುಖವಾಗಿ ಹೆಂಗಸರು ಕುಳಿತಿದ್ದರು. ಅರವಿಂದನು ತನ್ನ ಪಾಡಿಗೆ ತಾನು ಊಟ ಮಾಡುತ್ತಿರುವಾಗ, ಪಕ್ಕದಲ್ಲಿ ಕುಳಿತಿದ್ದ ಸ್ನೇಹಿತನೊಬ್ಬನು ಅವನನ್ನು ಮೊಳಕೈಯಿಂದ ತಿವಿದು "ಅಲ್ಲಿ ನೋಡಯ್ಯಾ! ನಿನ್ನ ಅದೃಷ್ಟದೇವತೇನಾ" ಎಂದು ಹೆಂಗಸರ ಪಂಕ್ತಿಯಲ್ಲಿ ಇವನಿಗೆ ನೇರವಾಗಿ ಎದುರುಗಡೆ ಕುಳಿತಿದ್ದ ಇಪ್ಪತ್ತೆಂಟು–ಮೂವತ್ತುವರುಷದ ಹೆಂಗಸೊಬ್ಬಳನ್ನು ತೋರಿಸಿದ. ಅದುವರೆಗೂ ಅರವಿಂದನನ್ನೂ ಎವೆಯಿಕ್ಕದೆ ನೋಡುತ್ತಿದ್ದ ಆಕೆಯು ಇವನು ಕತ್ತೆತ್ತುತ್ತಲೇ ತಾನು ಕತ್ತನ್ನು ತಗ್ಗಿಸಿಬಿಟ್ಟಳು ಕೆರಳಿದ ಕುತೂಹಲದಿಂದ ಅರವಿಂದನು ಆಗಾಗ ಆಕೆಯನ್ನು ನೋಡುತ್ತಿದ್ದ. ಆಕೆಯೂ ಮತ್ತೆ ಎರಡು ಮೂರು ಬಾರಿ ಇವನನ್ನು ದೃಷ್ಟಿಸಿದರು. ಈ ಮಧ್ಯೆ ಒಮ್ಮೆ ಅಕಸ್ಮಾತ್ತಾಗಿ ಇಬ್ಬರ ದೃಷ್ಟಿಯೂ ಪರಸ್ಪರ ಸೇರಿ, ಇಬ್ಬರೂ ಕತ್ತು ತಗ್ಗಿಸಿಬಿಟ್ಟರು.

ಮರುದಿವಸದಿಂದ ಅರವಿಂದನು ಮತ್ತೆ ಇನ್ಸ್ಟಿಟ್ಯೂಟ್‌ಗೆ ಕ್ರಮವಾಗಿ ಹೋಗತೊಡಗಿದ. ಮಿಸ್ ಕೋಮಲಾ ಯಾವುದೋ ಕಾರಣವಾಗಿ ಬೇರೆ ಊರಿಗೆ ವರ್ಗಾಯಿಸಲ್ಪಟ್ಟಳೆಂದೂ ಆ ಕಾರಣವು ಅಷ್ಟು ಹಿತವಾದ್ದಲ್ಲವೆಂದೂ ತನ್ನ ಅಲ್ಲಿನ ಗೆಳೆಯರಿಂದ ತಿಳಿದ. ಕೆಲವು ದಿವಸಗಳು ಹೋಗಿ ಬರುತ್ತಿರುವಲ್ಲಿ, ಅಂದು ಊಟದ ಸಮಯದಲ್ಲಿ ತನ್ನನ್ನು ದಿಟ್ಟಿಸಿದ ಆಕೆಯು ಮಿಸ್

ಪದ್ಮಾವತಿ ಬಿ.ಎ. ಎಂದೂ, ಆಕೆಯು ಮಿಷನ್ ಸ್ಕೂಲಿನ ಹೆಡ್ ಮಿಸ್ಟ್ರೆಸ್ ಎಂದೂ ತಿಳಿಯಿತು. ಆಕೆಯು ಅಷ್ಟು ಸುಂದರವಾಗೇನೂ ಇರಲಿಲ್ಲ; ಕಾರಣ ಯೌವನವು ಯಾವುದೋ ನಿರಾಶೆಯಿಂದ ನಾಚಿ ಕಂದಿ ಹಿಂದೆ ಹೋಗಿತ್ತು. ಆದರೆ ದೃಷ್ಟಿಗೆ ದೃಷ್ಟಿ ತಾಕಿದ ಅರವಿಂದನಿಗೆ ಮನಸ್ಸಿನ ತುಂಬ ಅವಳ ಮುಖವೇ ತುಂಬಿಹೋಗಿದ್ದಿತು. ಆಕೆಯು ಅವಿವಾಹಿತಳೆಂಬುದೇನೋ ಖಂಡಿತ. ಆದರೆ ವಿವಾಹದ ವಿಚಾರವನ್ನು ಪ್ರಸ್ತಾಪಿಸುವುದು ಹೇಗೆ? ಬಹುವಾಗಿ ಯೋಚಿಸಿ, ಕಡೆಗೆ ಗೆಳೆಯನೊಬ್ಬನನ್ನು ಕರೆದುಕೊಂಡು ಅವರ ಮನೆಗೆ ಹೋದದ್ದಾಯಿತು. ಅಲ್ಲಿ ಆಕೆ, ಅವಳ ವೃದ್ಧ ತಂದೆ ಇಬ್ಬರು ಮಾತ್ರ ಇದ್ದರು. ಹೇಳದೇ ಕೇಳದೇ ತಾನು ದೃಷ್ಟಿಯಿಟ್ಟ ಅವನು ಮಿತ್ರನೊಂದಿಗೆ ಬಂದದ್ದನ್ನು ನೋಡಿ ಆಕೆಗೆ ಆಶ್ಚರ್ಯಾನಂದಗಳು ಒಮ್ಮೆಲೇ ಚಿಮ್ಮಿದುವು. ಬಹು ಸಡಗರದಿಂದ ಒಳಕ್ಕೆ ಕರೆದು ಕುರ್ಚಿಯ ಮೇಲೆ ಕೂಡಿಸಿ, ಹೆಸರು ಹಿಟ್ಟಿನುಂಡೆ, ಓವಾಲ್ಟೀನುಗಳಿಂದ ಸತ್ಕರಿಸಿದಳು. ಸಮಸ್ತ ಕುಶಲ ಪ್ರಶ್ನೆಗಳೂ ಆದಮೇಲೆ ಗೆಳೆಯನು ತಾವು ಬಂದ ಉದ್ದೇಶವನ್ನು ಸೂಕ್ಷ್ಮವಾಗಿ ತಿಳಿಸಿದನು. ಅರವಿಂದನು ಅವಿವಾಹಿತನೆಂಬುದನ್ನು ಕೇಳಿ ಅವಳಿಗೆ ಬಹು ಸಂತೋಷವಾಯಿತು. ಆದರೂ ತನ್ನ ಸಂತೋಷವನ್ನು ವ್ಯಕ್ತಪಡಿಸದೆ, ತಾನು ವಿವಾಹಕ್ಕೆ ಸಿದ್ಧವಿರುವುದಾಗಿಯೂ ಆದರೆ ಅದಕ್ಕೆ ಮುಖ್ಯವಾದ ಒಂದು ಷರತ್ತಿರುವುದೆಂದೂ ಅದನ್ನು ತಮ್ಮ ತಂದೆಯವರನ್ನು ಕೇಳಿದರೆ ತಿಳಿಸುವುದಾಗಿಯೂ ಹೇಳಿ, ಅರವಿಂದನನ್ನು ಮಾತ್ರ ಒಳಗಿನ ನಡುಮನೆಗೆ ಕರೆದುಕೊಂಡು ಹೋದಳು. ಅಲ್ಲಿ ಮಂಚದ ಮೇಲೆ ಮಲಗಿದ್ದ ವೃದ್ಧನು ಕೆಮ್ಮುತ್ತಾ ಮೇಲೆದ್ದು ಪಕ್ಕದ ಕುರ್ಚಿಯನ್ನು ತೋರಿಸಿದ. ಅರವಿಂದನು ಕೂತಮೇಲೆ ಪದ್ಮಾವತಿಯು ಅವನ ಪರಿಚಯವನ್ನು ಮಾಡಿಸಿ ಕೊಟ್ಟು ಬಂದಿರುವ ಉದ್ದೇಶವನ್ನೂ ತಿಳಿಸಿ ಹೊರಕ್ಕೆ ಬಂದುಬಿಟ್ಟಳು. ವೃದ್ಧನು ನಿಟ್ಟುಸಿರುಬಿಟ್ಟು "ನೋಡಿಸ್ವಾಮೀ! ನನಗಿವಳೊಬ್ಬಳೇ ಮಗಳು. ಬೇರೆ ಗಂಡುಮಕ್ಕಳು ಸಹಾ ಇಲ್ಲ. ಇವಳನ್ನೇ ನನ್ನ ಗಂಡು ಮಗನೆಂದು ಸಾಕಿ ಓದಿಸಿದ್ದೇನೆ. ಇವಳಿಗೆ ಮದುವೆಮಾಡಬೇಕೆಂದು ಹತ್ತು ವರುಷದಿಂದ ಹಲವು ಪ್ರಯತ್ನಗಳನ್ನು ಮಾಡಿ ಸಫಲನಾಗದೆ ಸೋತು ಹಾಸಿಗೆಹಿಡಿದು ಬಿಟ್ಟೆ. ಈ ದೊಡ್ಡ ಜಗತ್ತಿನಲ್ಲಿ ಇವಳನ್ನ ಏಕಾಂಗಿಯಾಗಿಬಿಟ್ಟು ಸಾಯ

ಲಾರದೆ, ಜೀವ ಬಿಗಿಹಿಡಿದು ಬದುಕಿದ್ದೇನೆ. ಇವಳ ಷರತ್ತಿಗೆ ವಂಶಾಭಿವೃದ್ಧಿಯನ್ನು ಬಯಸುವ ಯಾವ ಮನುಷ್ಯನೂ ಒಪ್ಪಲಾರ.... ನಿಮಗೂ ಅದನ್ನ ಹೇಳಿಬಿಡುತ್ತೀನೆ ಕೇಳಿ.... ಮಕ್ಕಳನ್ನ ಹೆರುವುದು, ಸಾಕುವುದು ಮೃಗಗಳ ಕೆಲಸವಂತೆ. ಅದರಿಂದ ಯೌವ್ವನ ಹಾಳಾಗಿಬಿಡುವುದಂತೆ ಹೀಗೆ ಇವಳ ಹಿಂದಿನ ಸ್ಕೂಲಿನ ಉಪಾಧ್ಯಾಯಿನಿಯೊಬ್ಬಳು ಹೇಳಿ ಹುಚ್ಚು ಹಿಡಿಸಿದ್ದಾಳೆ. ಆದಕಾರಣ ಅವಳು ನಿಮ್ಮನ್ನು ಮದುವೆಯಾಗಿ ನಿಮಗೆ ಹೆಂಡತಿಯಾದರೂ, ನಿಮಗೆ ಅವಳಿಂದ ಮಕ್ಕಳಾಗದು, ಇದಕ್ಕೆ ಒಪ್ಪಿಗೆಯಿದ್ದಲ್ಲಿ ಅವಳು ನಿಮ್ಮನ್ನು ಮದುವೆಯಾದಾಳು!" ಎಂದು ಕೆಮ್ಮಿದ. ಅರವಿಂದನು ಆಶ್ಚರ್ಯದಿಂದ "ಅದೂ ಸಾಧ್ಯವೇ ?" ಎಂದು ತನಗೆ ತಾನೇ ಪ್ರಶ್ನಿಸಿಕೊಂಡ. ಅದಕ್ಕೆ ವೃದ್ಧನು "ಅದಕ್ಕೆಲ್ಲಾ ಏನೇನೋ ಔಷಧಿ ಪತ್ಯಗಳನ್ನು ತಿಳಿದು ಕೊಂಡಿದ್ದಾಳೆ. ಪುಸ್ತಕಗಳನ್ನ ಓದಿ-ಲೇಡೀಡಾಕ್ಟರುಗಳನ್ನು ಕೇಳಿ ಉಪಾಯಗಳನ್ನೆಲ್ಲಾ ತಿಳಿದಿದ್ದಾಳೆ" ಎಂದ. ಅರವಿಂದನಿಗೆ ಒಂದು ಬಗೆಯ ಸಂತೋಷವೇ ಆಯಿತು. "ಪೀಡೆ; ಎದ್ದರೆ ಕೂತರೆ ಹಿಂಸೆಕೊಡುತ್ತಾ ತಾಯಿಯನ್ನು ಹೀರಿ ಹಿಪ್ಪೆಕಾಯಿಮಾಡೋ ಈ 'ಕಾಂವ್ ಕಾಂವ್-ಕುಂಯ್-ಕುಂಯ್ !' ಹುಳುಗಳಿಲ್ಲದಿದ್ದರೇ ವಾಸಿ. ಯಾರಿಗೆಬೇಕು ಈ ಅನಿಷ್ಟಗಳು !! ಹಾಳಾಗಿಹೋಗಲಿ! ಒಳ್ಳೆಯದೇ! ಪದ್ಮಾವತೀ ಬಹಳ ಒಳ್ಳೇ ಷರತ್ತನ್ನೇ ಹಿಡಿದಿದ್ದಾಳೆ. ನಮ್ಮ ದೇಶದ ಹೆಂಗಸರೆಲ್ಲಾ ಇದೊಂದು ಪಟ್ಟು ಹಿಡಿದರೆ ದೇಶ ಎಷ್ಟೋ ಸುಭಿಕ್ಷವಾಗಿರುತ್ತೆ. ಹೆಂಗಸರು ಎಷ್ಟೋ ಆರೋಗ್ಯವಾಗಿ ಒಳ್ಳೇ ಬಾಡಿ, ಬಸ್ಟ್‌ಗಳನ್ನಿಟ್ಟುಕೊಂಡು ಎಷ್ಟೋ ಲಕ್ಷಣವಾಗಿರುತ್ತಾರೆ. ನ್ಯಾಯವೇ !! ಪದ್ಮಾವತೀ ಷರತ್ತು ಘನವಾಗಿದೆ !!" ಎಂದು ಮನಸ್ಸಿನಲ್ಲಿಯೇ ಬಹುವಾಗಿ ಮೆಚ್ಚಿಕೊಂಡು, "ಆಗಲೀ ! ನಿಮ್ಮ ಮಗಳ ಷರತ್ತು ನನಗೆ ಒಪ್ಪಿಗೆಯಾಗಿದೆ. ಏಕೆಂದರೆ ನಮ್ಮ ತಂದೆಗೆ ನಾವಿಬ್ಬರು ಅವಳಿಮಕ್ಕಳು. ಇನ್ನೊಬ್ಬ ಮಗನಿಗೆ ಅವರು ಹಿಂದೆಯೇ ಮದುವೆ ಮಾಡಿದ್ದರು. ಈಗ ಅವನಿಗೆ ಎರಡು ಗಂಡುಮಕ್ಕಳಿವೆ. ಆದ್ದರಿಂದ ನಮ್ಮ ವಂಶದ ಬೆಳವಣಿಗೆಗೇನೂ ತೊಂದರೆಯಿಲ್ಲ" ಎಂದ. ಅದಕ್ಕೆ ವೃದ್ಧನು "ಆದರೂ ನಿಮ್ಮ ಹಿರಿಯರನ್ನು ಕೇಳಿ ಹೇಳುವುದು ಮೇಲು" ಎಂದ. ಅದಕ್ಕೆ ಅರವಿಂದನು "ಈಗ ಮನೆಗೆ ನಾನೇ ಹಿರಿಯ. ಮತ್ತೆ ಯಾರೂ ಇಲ್ಲ" ಎಂದ.

ಮುದುಕನು "ತಂಟೆ ಫೈಸಲಾಯ್ತು ಬಿಡಿ" ಎಂದು ಹೇಳಿ "ಪದ್ಮಾ! ಪದ್ಮಾ!!" ಎಂದು ಕೆಮ್ಮುತ್ತಾ ಎದೆಹಿಡಿದುಕೊಂಡು ಕೂಗಿದ. ಪದ್ಮಾವತಿ ಒಳಕ್ಕೆ ಬಂದು "ಏನಪ್ಪಾ ?" ಎಂದಳು. "ಈ ನಿಮ್ಮ ಲಾಯರು ನಿನ್ನ ಷರತ್ತಿಗೊಪ್ಪಿದ್ದಾರೆ. ಮಿಕ್ಕದ್ದೆಲ್ಲಾ ನೀನೂ ಅವರು ತೀರ್ಮಾನಮಾಡಿ ಕೊಳ್ಳಿ" ಎಂದು ಹೇಳಿ ಅರವಿಂದನ ಕಡೆಗೆ ತಿರುಗಿ, "ದೇವರು ಬಂದಹಾಗೆ ಬಂದಿರಿ ಈವತ್ತು ನಮ್ಮ ಮನೆಗೆ" ಎಂದು ಹೇಳಿ ಕೆಮ್ಮುತ್ತಾ ಮುಸುಗಿಟ್ಟು ಮಲಗಿಕೊಂಡ. ಪದ್ಮಾವತಿಯು ಅರವಿಂದನ ಗುಂಗುರು ತಲೆಯನ್ನು ಎಳೆಯ ಹುಡುಗಿಯಂತೆ ತನ್ನೆರಡು ಕೈಗಳಿಂದಲೂ ಕೆದರಿಬಿಟ್ಟು "ಬನ್ನೀ" ಎಂದು ಹೊರಕ್ಕೆ ಬಂದಳು. ಅಲ್ಲಿ 'ಬೆಕೋ' ಎಂದು ಬಾಯಿಬಿಟ್ಟುಕೊಂಡು ಕುಳಿತಿದ್ದ ಸ್ನೇಹಿತನು ಇವರಿಬ್ಬರ ಗೆಲುಮುಖಗಳನ್ನೂ ನೋಡುತ್ತಲೇ ಕುರ್ಚಿ ಯಿಂದ ನೆಗೆದು "ಕಂಗ್ರಾಚುಲೇಷನ್ಸ್ ಫ್ರೆಂಡ್ಸ್ !!" ಎಂದ. ಪದ್ಮಾ ವತಿಯು ಕತ್ತು ತಗ್ಗಿಸಿಬಿಟ್ಟಳು, ಅರವಿಂದನು ಅವಳ ಜಡೆಯನ್ನೆಳೆದು ಹೊರಟು ಬಂದುಬಿಟ್ಟ.

* * * *

ನಾಲ್ಕು ದಿವಸಗಳಲ್ಲೇ ಬಿ. ಎ. ಅರವಿಂದ್, ಬಿ.ಎ.ಬಿ.ಎಲ್. ಮತ್ತು ಎಸ್. ಪದ್ಮಾವತಿ ಬಿ. ಎ., ಇವರ ವಿವಾಹವು ಕೇವಲ ಒಂದು ದಿನದಲ್ಲೇ ವಿಧಿವತ್ತಾಗಿ ಮನೆಯಲ್ಲಿ ನಡೆದು, ರಾತ್ರಿಗೆ ರಿಸೆಪ್ಷನ್ ಮತ್ತು ಡಿನ್ನರ್ ಎರಡೂ ಇನ್ಸ್ಟಿಟ್ಯೂಟ್‌ನಲ್ಲೇ ನಡೆಯಿತು. ಬಂದಿದ್ದ ಇತರ ಅತಿಥಿಗಳೇ ನಾನ್ನೂರಷ್ಟಿದ್ದರಿಂದ, ಮೊದಲನೇ ಪಂಕ್ತಿಗೆ ಅವರೆಲ್ಲರ ಊಟವಾಗಿ, ಮೆಂಬರುಗಳೆಲ್ಲರೂ ಎರಡನೇ ಪಂಕ್ತಿಯಲ್ಲಿ ಕೂತು ಗದ್ದಲ ಮಾಡಿಕೊಂಡು ಎರಡು ಘಂಟೆ ಹೊತ್ತು ಊಟಮಾಡಿ, ಅಡಿಕೆಲೆ ಅಗಿದು, ಸಿಗರೇಟ್ ಸೇದಿ, ಹಾಸ್ಯ ಕುಚೋದ್ಯಗಳಲ್ಲಿದ್ದು ಬಹು ತಡವಾಗಿ ತಮ್ಮ ತಮ್ಮ ಮನೆಗಳಿಗೆ ಹೋದರು.

## 2

ಅರವಿಂದನು ಮದುವೆಯಾಗಿ ಆರು ತಿಂಗಳಾಗಿದ್ದುವು. ಪದ್ಮಾವತಿಯ ತಂದೆಯು ಮದುವೆಯಾದ ಎರಡನೇ ತಿಂಗಳಲ್ಲೇ ತೀರಿಕೊಂಡ. ಅರವಿಂದ ಪದ್ಮಾವತಿ ಇಬ್ಬರೂ ಮಹಡಿಯ ಮೇಲೆ ಇದ್ದರು. ಎಲ್ಲರ ಅಡುಗೆಯನ್ನೂ

ಅನ್ನಪೂರ್ಣೆಯೇ ಸಂತೋಷದಿಂದ ಮಾಡಿ ಅವರವರ ಸಮಯಕ್ಕೆ ಬೇರೆ ಬೇರೆಯಾಗಿ ಬೇಸರಗೊಳ್ಳದೇ ಬಡಿಸುತ್ತಿದ್ದಳು. ಮಿಕ್ಕ ತಿಂಡಿ ತೀರ್ಥಗಳ "ಸಪ್ಲೈ"ಗಳನ್ನು ಬಾಲಕೃಷ್ಣ ಉರುಫ್ ಮುಕುಂದ್ ಉರುಫ್ ಪುಟ್ಟು ಸದಾ ನಗುಮುಖದಿಂದ ಮಾಡುತ್ತಿದ್ದ. ಪದ್ಮಾವತಿಯ ದರ್ಪ, ಧೋರಣೆ ಗಳು ಅಶೋಕನಿಗೂ ಅನ್ನಪೂರ್ಣೆಗೂ ಎಷ್ಟೋ ವೇಳೆ ಅಪಮಾನಕರವಾಗಿ ಕಂಡುಬರುತ್ತಿದ್ದರೂ "ಕಮಲಮ್ಮ"ನು ಅರವಿಂದನ ವಿಚಾರದಲ್ಲಿ ಹೇಳಿದ್ದ 'ಕಡೆಯ ಮಾತು' ನೆನಪಾಗಿ ಒಬ್ಬರನ್ನೊಬ್ಬರು ಸಮಾಧಾನಪಡಿಸುತ್ತಿದ್ದರು. ಅವಳಾದರೂ ತನ್ನ ಸಂಬಳವನ್ನೆಲ್ಲಾ ಬ್ಯಾಂಕಿನಲ್ಲಿ ಹಾಕಿಕೊಂಡು ತನ್ನ ಬಟ್ಟೆ ಬರೆ ಮತ್ತೂ ಇತರ ಖರ್ಚುಗಳಿಗೆಲ್ಲಾ ಗಂಡನಿಂದಲೇ ದುಡ್ಡನ್ನು ಹಿರಿಯುತ್ತಿದ್ದಳು. "ಬ್ಯಾಂಕಿನ ದುಡ್ಡನ್ನೇನು ಮಾಡುತ್ತೀ ?" ಎಂದು ಒಂದು ದಿನ ತಮಾಷೆಗೆ ಗಂಡನು ಕೇಳಿದ್ದಕ್ಕೇನೇ ಅವಳು ಸಿಟ್ಟಾಗಿ "ನನ್ನ ಹಿಂದೇನೇ ತಗೊಂಡು ಹೋಗುತ್ತೇನೇ! ಅದರ ವಿಚಾರ ಸಂಪಾದಿಸೋ ಗಂಡಸಿಗೆ ಯಾಕೆ ?" ಎಂದು ಗದರಿಸಿದ್ದಳು. ಅರವಿಂದನು ಅವಳ "ಜಂಬ"ಕ್ಕೆ ಆಗಾಗ ಸಿಟ್ಟಾದರೂ, ಮರುಕ್ಷಣವೇ ಅವಳ 'ಇಂಗ್ಲಿಷ್' ಮಾತಿಗೆ ಸೋತು ಗುಲಾ ಮನಂತೆ ಕೈಜೋಡಿಸುತ್ತಿದ್ದ. ಬರಬರುತ್ತಾ ಅನ್ನಪೂರ್ಣೆಯ ಅಡುಗೆಯ ರುಚಿಯು ಇವಳಿಗೆ 'ಅಸಹ್ಯ'ವಾಗುತ್ತ ಬಂತು. ತಾವು ಬೇರೆ ಅಡುಗೆಯವ ನನ್ನು ಇಟ್ಟುಕೊಂಡು ತಮಗೆ ಇಷ್ಟಬಂದಂತೆ ತಮ್ಮ ರುಚಿಗೆ ಬೇಕಾದ ಅಡುಗೆಯನ್ನು ಮಾಡಿಸಿ ಊಟಮಾಡುವುದಾಗಿಯೂ, ಅದಕ್ಕಾಗಿ ಅಡುಗೆಯ ಮನೆಯನ್ನು ಬಿಟ್ಟುಕೊಡಬೇಕೆಂದೂ ಹಟ ಮಾಡಿದಳು. ಅರವಿಂದನು ಹೇಳಿದ ಸಮಾಧಾನದ ಮಾತುಗಳು ಕೆಲಸಕ್ಕೆ ಬಾರದೇ ಹೋಯಿತು. ಕಡೆಗೆ 'ಇಂಗ್ಲಿಷ್'ನಲ್ಲೇ ಅಳುತ್ತಾ ಗಂಡನನ್ನು 'ಇಂಗ್ಲಿಷ್' ನಲ್ಲೇ ಬಯ್ಯತೊಡಗಿದಳು. ಅಲ್ಲದೇ ತಾನು ಮಿರ್ಷ ಕಾಲೇಜ್ ಹಾಸ್ಟೆಲ್ ಸೇರಿಬಿಡುವುದಾಗಿಯೂ ಹೆದರಿಸಿದಳು. ಅರವಿಂದನು ವಿಧಿಯಿಲ್ಲದೆ ತನ್ನ ಹೆಂಡತಿಯ ಅಭಿಪ್ರಾಯವನ್ನು ಅಶೋಕನಿಗೆ ತಿಳಿಸಿದ. ಅಶೋಕನೂ ಅನ್ನಪೂರ್ಣೆಯೂ ಯೋಚನೆ ಮಾಡಿ, ತಾವು ಹೇಗಾದರೂ ಮಾಡಿ ಮನೆಯನ್ನು ಅವರಿಗೆ ಬಿಟ್ಟುಕೊಡುವುದೊಂದೇ ದಾರಿಯೆಂದು ಇಲ್ಲದಿದ್ದರೆ ಕಮಲಮ್ಮನ ಕಡೆಯ ಮಾತಿಗೆ 'ಭಂಗ'ಬರುವುದೆಂದು ತೀರ್ಮಾನಿಸಿ

ಕಾಲೇಜ್ ಹಾಸ್ಟೆಲ್ ವಾರ್ಡನ್ ಕೆಲಸಕ್ಕೆ ತನ್ನ ಒಪ್ಪಿಗೆಯನ್ನು ಕಳುಹಿಸಿ, ಎರಡು ತಿಂಗಳ ನಂತರ, ಒಂದು ಒಳ್ಳೆಯದಿನ ಗುರುಗಳ ಪಟವನ್ನೂ, ಅರ್ಧ ನಾರೀಶ್ವರನ ಪಟವನ್ನೂ ಮೊದಲು ವಾರ್ಡನ್ ಕ್ವಾರ್ಟರ್ಸ್‌ಗೆ ತೆಗೆದು ಕೊಂಡು ಹೋಗಿಟ್ಟು, ಹಾಲುಕ್ಕಿಸಿ ಬಂದು, ಆಮೇಲೆ ನಿಧಾನವಾಗಿ ಕೆಲವು ಅತ್ಯಗತ್ಯವಾದ ಪಾತ್ರೆಪದಾರ್ಥಗಳು, ಸಾಮಾನುಗಳನ್ನು ಸಾಗಿಸಿ, ಅಲ್ಲೇ ವಾಸಿಸತೊಡಗಿದರು.

ಕಡೆಗೆ ಇಷ್ಟು ದೊಡ್ಡ ಮನೆಗೆ ಅರವಿಂದ ಪದ್ಮಾವತಿ ಇಬ್ಬರೇ ಆದರು. ಅರವಿಂದನು ಗೊತ್ತು ಮಾಡಿದ ಯಾವ ಅಡುಗೆಯವನೂ ಮೂರು ದಿವಸ ಸರಿಯಾಗಿ ಇರುತ್ತಿರಲಿಲ್ಲ. ಏಕೆಂದರೆ ಪದ್ಮಾವತಿಯ ದರ್ಬಾರು ಚಿತ್ರಹಿಂಸೆ ಯಾಗಿತ್ತು; ಸದಾ ಉಚ್ಚಾಯಿಸೀ ಮಾತನಾಡುತ್ತಿದ್ದಳು. 'ಪುಟ್ಟು' ಹೊರಟುಹೋದದ್ದು ಅರವಿಂದನ ಮನಸ್ಸಿನ ಮೇಲೆ ಬಹು ಪರಿಣಾಮ ವನ್ನುಂಟುಮಾಡಿತು. ಮನೆಗೆ ಬರುತ್ತಲೇ ಜೇಬಿನಿಂದ ಬಿಸ್ಕತ್ತು ಚಾಕೋ ಲೇಟ್‌ಗಳನ್ನು ಅಭ್ಯಾಸ ಬಲಿಯದಿಂದ ತೆಗೆದು, ಮಹಡಿಯ ಮೇಲೆ ನೋಡಿ, ಮರುಗಿ, ಹಾಗೇ ಜೇಬಿನಲ್ಲಿಟ್ಟು ಒಳಕ್ಕೆ ಹೋಗಿ ಕೂತುಬಿಡುತ್ತಿದ್ದ. ಗೃಹಸ್ಥ ಜೀವನವು ತಾನು ಬಯಸಿದ್ದಷ್ಟು ಸುಖಮಯವಾಗಿಯೂ ಪರಸ್ಪರ ಪ್ರೇಮ ಮಯವಾಗಿಯೂ ನಡೆಯದಿರುವುದನ್ನು ಕಂಡು ಆಗಾಗ ನಿರಾಶನಾಗುತ್ತಿದ್ದ ಮನೆಯಲ್ಲಿ ಗಂಡಹೆಂಡತಿಯರು ಯಾವೊಂದು ವಿಚಾರದಲ್ಲೂ ಸಹಮತ ವಾಗುವಂತೆಯೇ ಇರಲಿಲ್ಲ. ಮನೆಯಲ್ಲಿ ಯಾರು ಗಂಡ, ಯಾರು ಹೆಂಡತಿ ಎಂಬುದೇ ನಿರ್ಧಾರವಾಗಿರಲಿಲ್ಲ. ವಿಶೇಷವಾಗಿ ಗೃಹಕೃತ್ಯ ನಿರ್ವಹಣಾ ಸೂತ್ರವೆಲ್ಲಾ ಪದ್ಮಾವತಿಯ ಕೈಯಲ್ಲಿ. ಅವಳೋ ವಿಶೇಷವಾಗಿ ಅಹಂಕಾರ ಸಿಡುಕು ಕೋಪಗಳಲ್ಲೇ ಇರುತ್ತಿದ್ದಳು. ಆದರೆ ಇವನ್ನೆಲ್ಲ ತನುಮನಧನದಿಂದ ಸಮಾಧಾನಪಡಿಸಿ ಗೃಹಸ್ಥಿಯನ್ನು ತೂಗಿಸಬೇಕಾಗಿದ್ದ ಭಾರ ಅರವಿಂದನ ಮೇಲೆ ಬಿದ್ದಿತ್ತು. ಹುಟ್ಟಿದಾರಭ್ಯ 'ಆ ಮಹಾತಾಯಿಯು' ತನ್ನ ಅಮೃತ ಹಸ್ತದಿಂದ ಪ್ರೇಮಾಮೃತದ ಊಟವನ್ನೇ ಮಾಡಿಸಿ ಬೆಳೆಸಿದಳು. ಅವಳ ನಂತರ ಈಚೆಗೆ 'ಅನ್ನಪೂರ್ಣೆ'ಯು ಮಹಾ ಭಯಭಕ್ತಿಯಿಂದ ಅಡುಗೆ ಮಾಡಿ ಬಡಿಸಿ, 'ಅಮ್ಮ'ನು ಇಲ್ಲವೆಂಬ ಯೋಚನೆಯನ್ನು ಮರೆಸುತ್ತಿದ್ದಳು. ಆದರೆ ಈಗ ಮೂರುದಿನ ಕುಂದಾಪುರದ ಊಟ; ಮೂರು ದಿನ ನರಸೀ

ಪುರದ ಊಟ; ಮೂರು ದಿವಸ ತೀರ್ಥಹಳ್ಳಿ ಊಟ—ಮೂರು ದಿವಸ ಪದ್ಮಾವತಿಯೇ ರೇಗಾಡಿಕೊಂಡು ಬೇಯಿಸಿದ ಬೆಂದೂ ಬೇಯದೂಟ. ಅರವಿಂದನು 'ಏಕೆ ಹೀಗಾಗಿದೆ'ಯೆಂದು ಯೋಚಿಸಿ ಯೋಚಿಸಿ ಸುಮ್ಮನಾಗ ತ್ತಿದ್ದ. "ನಾನು ಸ್ವಲ್ಪ ದರ್ಪದಿಂದ ಆಳಲಾರಂಭಿಸಲೇ?....ಅವಳನ್ನು ಆ ಕೆಲಸವನ್ನು ಬಿಟ್ಟುಬಿಟ್ಟು. ಮನೆಯಲ್ಲಿ ಗೃಹಿಣಿಯಾಗಿರೆಂದು ಹೇಳಿಬಿಡಲೇ? ....'ಇದು ನನ್ನ ಮನೆ; ನನ್ನ ಅಪ್ಪಣೆಯಂತೆಯೇ ಇಲ್ಲಿ ಪ್ರತಿಯೊಂದೂ ನಡೆಯಬೇಕೆಂದು ಪಟ್ಟು ಹಿಡಿಯಲೇ?" ಎಂದು ಬಹು ಹೊತ್ತು ಯೋಚಿಸಿ, "ಪದ್ಮಾವತಿ-ಬಿ.ಎ. ಮಾಡಿದ್ದಾಳೆ. ಸ್ವತಃ ಸಂಪಾದನೆ ಮಾಡುವವಳು ಹಣದ ಶಕ್ತಿಯನ್ನು ಕಂಡವಳು. ಬ್ಯಾಂಕಿನಲ್ಲಿ ಹಣವುಳ್ಳವಳು. ಓದಿದವಳು. ಕಾನೂನನ್ನರಿತವಳು. ತಿರುಗಿಬಿದ್ದರೆ ನನ್ನ ಗತಿಯೇನು!" ಎಂದು ನಿಟ್ಟುಸಿರುಬಿಟ್ಟು ಮೆತ್ತಗಾಗಿಬಿಡುತ್ತಿದ್ದ.

ಎಷ್ಟೋ ದಿವಸಗಳು ಮನೆಯಲ್ಲಿ ಒಂಟಿಯಾಗಿ ಘಂಟೆಗಟ್ಟಲೆ ಕೂತು ಬಿಟ್ಟು ಮಂಕಾಗಿಬಿಡುತ್ತಿದ್ದ. ಕಡೆಗೆ ಎಂದೋ ಒಂದು ದಿನ ಬಂದು ಹೊಸ 'ಥಿಯರಿ' ಹೊಳೆಯಿತು. "ಮಕ್ಕಳಾಗದ ಹೆಂಗಸಿಗೆ ಮನೆಯ ಮೇಲೆ ಅಭಿಮಾನ ಪ್ರೇಮವಿರುವುದಿಲ್ಲ. ಅವಳು ಹೊರಗಣೆಯ ವ್ಯವಹಾರೀ ಜಗತ್ತಿಗೆ ಅಂಟಿದವಳಾದರಂತೂ ತೀರೇ ಹೋಯಿತು. ಅಲ್ಲದೇ ಮಕ್ಕಳೇ ಹೆಣ್ಣನ್ನು ಹೆಣ್ಣಾಗಿ ಮಾಡಿ, ಗಂಡಹೆಂಡಿರ ಕಾಮವನ್ನು ಪ್ರೇಮವಾಗಿ ಹಣ್ಣಾಗಿಸಿ, ಆನಂದವನ್ನು ಕೊಡುವುವು. ಮಕ್ಕಳನ್ನು ಪಡೆಯದ ಹೆಣ್ಣು ಗಂಡಿಗಿಂತಲೂ ಹೆಚ್ಚು ರೋಷಾವೇಶದ ಮುಷ್ಟನ್ನುಗ." ಹೀಗೆಂದು ಸಿದ್ಧಾಂತ ಮಾಡಿಕೊಂಡು ಈ ಸಿದ್ಧಾಂತಕ್ಕೆ ಹಲವಾರು ಉದಾಹರಣೆಗಳನ್ನು ಜೋಡಿ ಸುತ್ತಾ ಕಾಲ ಕಳೆಯುವನು. ಎಂದೋ ಒಂದು ದಿನ ತಡೆಯಲಾರದೆ ತನ್ನ ಹೊಸ ಸಿದ್ಧಾಂತದ ರೂಪುರೇಷೆಯನ್ನು ಬಹು ಕೋಮಲವಾಗಿ ಪದ್ಮಾವತಿಗೆ ಕೃತಪಡಿಸಿದ ಅಪರಾಧಕ್ಕೆ, ಮೂರು ದಿನ ಇಬ್ಬರಿಗೂ ಸಾದಾ ಸಜಾ-ಗಂಡ ಹಾಲಿನಲ್ಲಿ; ಹೆಂಡತಿ ರೂಮಿನಲ್ಲಿ; ಮಾತಿಲ್ಲ; ಕತೆಯಿಲ್ಲ.

## ೮

ಐದು ವರುಷಗಳು ಕಳೆದಿದ್ದುವು. ಮದುವೆಗೆ ಮುಂಚೆ ತೆಳುವಾಗಿದ್ದ ಪದ್ಮಾವತಿಯು ಈಗ ಬಲೂನಿನಂತೆ ಊದಿ ಧಡೂತಿ ಹೆಂಗಸಾಗಿದ್ದಾಳೆ. ಕೆನ್ನೆ

ಗಳೆಲ್ಲಾ ದಪ್ಪನಾಗಿ ಮುಖ ಬೊಜ್ಜು ಬಿದ್ದಂತೆ ಕಾಣುತ್ತದೆ. ಮಿಷನ್ ಸ್ಕೂಲಿನ ಉಪಾಧ್ಯಾಯಿನಿಯರೇ ಈಗ ಇವಳು ನಡೆದು ಬರುತ್ತಿದ್ದರೆ 'ಗುಜ್ಜಾನೆ ಮರಿ ಬಂತು' ಎಂದು ತಮ್ಮ ತಮ್ಮಲ್ಲೇ ಹಾಸ್ಯ ಮಾಡಿಕೊಳ್ಳು ತ್ತಾರೆ. ಹುಡುಗಿಯರಂತೂ 'ಹೆಡ್ ಮೇಡಮ್ ಬರುತ್ತಾರೆ' ಅನ್ನುವುದಕ್ಕೆ ಬದಲಾಗಿ 'ದೊಡ್ಡ ಮೇಡಮ್ ಬರುತಾರೆ' ಎಂದು ಹಾಸ್ಯ ಮಾಡುತ್ತವೆ. ಕಡೆಗೆ ಈ ಹಾಸ್ಯವು ವಿಪರೀತಕ್ಕಿಟ್ಟುಕೊಂಡಿತು. ಬರುಬರುತ್ತಾ ಕ್ಲಾಸಿನಲ್ಲಿ ಕೂತು ಪಾಠ ಹೇಳುವುದೇ ಬಹಳ ಆಯಾಸಕರವಾಗುತ್ತಾ ಬಂದಿತು. ವಿಧಿ ಯಿಲ್ಲದೆ, ಪದ್ಮಾವತಿಯು ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟು ಮನೆಗೆ ಬಂದಳು. ಅವಳು ಕೆಲಸವನ್ನು ಬಿಟ್ಟುಬಿಟ್ಟರೆ ಮನೆಯಲ್ಲಿ ಸ್ವಲ್ಪ ಸಮಾ ಧಾನವಾದೀತೆಂದು ತಿಳಿದಿದ್ದ ಅರವಿಂದನು ಮೋಸ ಹೋದ. ಅವನ ತಲೆ ಕೂದಲೆಲ್ಲಾ ನರೆತುಹೋಗುತ್ತಾ ಬಂದಿದ್ದಿತು. ಹಣೆಯೆಲ್ಲಾ ಸುಕ್ಕು ಬಿದ್ದು ಮುಂದುಗಡೆಯ ಎರಡು ಹಲ್ಲುಗಳೂ ಬಿದ್ದುಹೋಗಿ ಕಟ್ಟಿಸಿಕೊಂಡಿದ್ದ. ಹೆಂಡತಿ ಮನೆಯಲ್ಲಿಯೇ ಇರುವ ಪ್ರಯುಕ್ತ ತಾನು ಅವಳ ಟೈಂಟೇಬಲ್ ನಂತೆ ಕೆಲಸ ಮಾಡಬೇಕಾಗಿ ಬಂದಿತು. ಬೆಳಿಗ್ಗೆ ಅವಳೊಂದಿಗೆ ತರಕಾರಿ ತರಲು ಹೋಗುವುದು. ನಂತರ ಸ್ನಾನ, ಕಾಫಿ, ನಂತರ ಕಕ್ಷಿಗಾರರ ಭೇಟಿ. ಘಂಟೆ ನಂತರ ಹೊಟ್ಟೆಹಸಿಯಲೀ, ಹಸಿಯದಿರಲೀ, ಕೋರ್ಟಿರಲೀ, ರಜಾ ಬಂದಿರಲೀ ಹತ್ತುಘಂಟೆಗೆ ಸರಿಯಾಗಿ ಊಟಮಾಡಿಬಿಡಬೇಕು. ಮಧ್ಯಾಹ್ನ ಬಿಸಿಲು; ಆ ಮಾಸಕ್ಕೆಂದು ಮಲಗಿದ್ದನೂ ಒಂದೂವರೆಗೆ ಕಾಫಿ, ಕುಡಿಯಲೇ ಬೇಕು. ಮೂರು ಘಂಟೆಗೆ ಎರಡು ಕೋಡುಬಳೆ, ಅಥವಾ ನಾಲ್ಕು ಪಕೌಡ ಒಂದು ಲೋಟ ನೀರು. ಮತ್ತೆ ಸಂಜೆಗೆ ಸಂಗಡ ವಾಕಿಂಗ್; ಕ್ಲಬ್ಬೂ ಇನ್ಸ್ಟಿಟ್ಯೂಟೆಲ್ಲಾ ವಜಾ. ರಾತ್ರಿ ಎಂಟಕ್ಕೆ ಸರಿಯಾಗಿ ಊಟ. ಒಂಭತ್ತಕ್ಕೆ ಮಲಗಿಬಿಡುವುದು. ಪದ್ಮಾವತಿಯು ಸ್ಥೂಲವಾದಂತೆಲ್ಲಾ ಅವಳ ಸಿಡುಕು ಹೆಚ್ಚುತ್ತಲೇ ಇತ್ತು. ಕಡೆಗೆ ಅರವಿಂದನು ತನ್ನ ಸ್ನೇಹಿತನೊಬ್ಬನ ಸಲಹೆ ಯಂತೆ ಅವಳನ್ನು ವೆಲ್ಲೂರಿನ ಅಪ್ಪು ಮಿಷನ್ ಆಸ್ಪತ್ರೆಗೆ ಕರೆದುಕೊಂಡು ಹೋಗಿ ತೋರಿಸಿದ ಅಲ್ಲಿಯ ಲೇಡಿ ಡಾಕ್ಟರರು ಚೆನ್ನಾಗಿ ಪರೀಕ್ಷೆಮಾಡಿ ಬಂದು ಮಕ್ಕಳಾಗದಂತೆ ಏನಾದರೂ ಔಷಧಿ ಪಥ್ಯಗಳನ್ನು ಮಾಡು ತ್ತಿದ್ದೀರಾ ?" ಎಂದು ಅರವಿಂದನೆದುರಿಗೇನೇ ಕೇಳಿಬಿಟ್ಟಳು. ಪದ್ಮಾವತಿಯು

ಅಹುದೆಂದಳು. ಅಕೆಯು "ಏನದು ?" ಎಂದುದಕ್ಕೆ ಪದ್ಮಾವತಿಯು ಒಂದು ಕಾಗದದ ಮೇಲೆ ನಾಲ್ಕಾರು ಪಂಕ್ತಿ ಬರೆದುಕೊಟ್ಟಳು. ಅದನ್ನು ನೋಡಿ ಆ ಲೇಡಿ ಡಾಕ್ಟರರು ನಸುಗೋಪದಿಂದ "ಎಂಥ ಮೌಢ್ಯದ ಕೆಲಸ. ನೀವು ಇಂಗ್ಲಿಷ್ ಓದಿದವರು. ಪದವೀಧರರು. ಯಾರಾದರೂ ಡಾಕ್ಟರರನ್ನು ಕೇಳಲ್ಲವೇ ಇಂಥಾದನ್ನು ಮಾಡಬೇಕಾದದ್ದು! ನೋಡೀ! ಇವುಗಳಲ್ಲಿ ಕೆಲವು ಅಷ್ಟು ತೊಂದರೆ ಕೊಡುವುವಲ್ಲ. ಮತ್ತೆ ಕೆಲವು ದೇಹಕ್ಕೆ ತೊಂದರೆ ಕೊಡುವಂಥವು. ಇವನ್ನು ಉಪಯೋಗಿಸುವುದೇ ಸರಿಯಲ್ಲ. ವಿಧಿಯಿಲ್ಲದೆ ವರ್ಷಕ್ಕೊಂದು ಮಕ್ಕಳಾಗಿಯಾಗಲೀ, ಅಥವಾ ನಾಲ್ಕೈದು ಮಕ್ಕಳಾಗಿ ಬಿಟ್ಟ ಮೇಲಾಗಲೀ ಮಕ್ಕಳು ಸಾಕೆನಿಸಿದಾಗ ಅಪುರೂಪವಾಗಿ ಪದಿನೈದು ದಿವಸಕ್ಕೊ, ತಿಂಗಳಿಗೋ ಒಮ್ಮೆ ಉಪಯೋಗಿಸಿದಲ್ಲಿ ಯಾವ ತೊಂದರೆಯೂ ಆಗಲಾರದು. ಆದರೆ ಪ್ರಾರಂಭದಿಂದಲೇ ಇವನ್ನು ವಿಶೇಷವಾಗಿ ಉಪ ಯೋಗಿಸುತ್ತಾ ಬಂದರೆ ಅದರಿಂದ ನಾನಾ ವಿಪರೀತಗಳಾಗುವುವು" ಎಂದು ಹೇಳಿದಳು. ಇದನ್ನು ಕೇಳಿ ಅರವಿಂದನಿಗೆ ಸ್ವಲ್ಪ ಸಂತೋಷವಾಗಿ ದೂರದ ಆಶೆಯೊಂದು ಸಮೀಪಕ್ಕೆ ಬಂದಂತಾಯಿತು. "ಹೋಗಲೀ ಈ ವಯಸ್ಸಿಗಾದರೂ ಮಗುವನ್ನು ಕಾಣಬಹುದಲ್ಲಾ!" ಎಂದು ತನ್ನಲ್ಲೇ ಹಿಗ್ಗಿದ. ಆದರೆ ಡಾಕ್ಟರಳ ಮಾತಿಗೆ ಪದ್ಮಾವತಿಯು "ಆದರೆ ಈಗೊಂದು ವರುಷದಿಂದ ಮಕ್ಕಳಾಗಲೆಂಬಾಶೆಯಿಂದ ಇವು ಯಾವುದನ್ನೂ ಉಪಯೋಗಿಸುತ್ತಿಲ್ಲವಲ್ಲಾ. ಆದರೂ ಕೂಡ .... " ಎಂದು ದುಃಖದಿಂದ ಹೇಳಿದ ಮಾತನ್ನು ಕೇಳಿ ಲೇಡಿಡಾಕ್ಟರರು "ಟೂಲೇಟ್ ! .... ರಿಯಲೈಸೇಷನ್ ಹ್ಯಾಸ್ ಕಮ್ ಟೂಲೇಟ್ ! .... ನಿಷ್ಕಾರಣವಾಗಿ ಮಿತಿಮೀರಿ ಇವನ್ನೆಲ್ಲಾ ಉಪಯೋಗಿಸಿದ ಕಾರಣ ನಿಮ್ಮ ಗರ್ಭಕೋಶದ ನರಗಳು ಸತ್ತುಹೋಗಿವೆ. ನಿಮಗೆ ಮಕ್ಕಳಾಗುವ ಭಯವೇ ಇಲ್ಲ. ಔಷಧಿಗಳು ಪೂರ್ಣ ಕೆಲಸಮಾಡಿವೆ" ಎಂದು ಹೇಳುತ್ತಾ ಅರವಿಂದನ ಕಡೆಗೆ ತಿರುಗಿ "ಎಕ್ಸ್‌ಕ್ಯೂಸ್‌ಮಿ ಜಂಟಲ್‌ಮನ್-ಗುಡ್‌ಬೈ" ಎಂದು ಹೇಳಿ ಪದ್ಮಾವತಿಗೆ ನಮಸ್ಕರಿಸಿ ಹೊರಟುಹೋದಳು. ಅರವಿಂದನ ನಿರಾಶೆಯು ಬಹು ತೀವ್ರವಾಗಿ, ಕಡುನೊಂದನು.

ಊರಿಗೆ ಹಿಂದಿರುಗಿ ಬಂದ ಮೇಲೆ ಪದ್ಮಾವತಿಯು ಮತ್ತು ಅರವಿಂದರ ಮನಸ್ಸುಗಳು ಬಹು ಪರಿವರ್ತನವಾಗುತ್ತ ಬಂದುವು. ಅರವಿಂದನ ಮನಸ್ಸು

ಹಿಂದಿನ ದಿನಗಳನ್ನೆಲ್ಲಾ ನೆನೆದು ದುಃಖಿಸುತ್ತಿತ್ತು. "ಜೀವನವು ಭವಿಷ್ಯ ಹೀನವಾದುದಿಷ್ಟೇ ಅಲ್ಲ; ಪುರುಷಾರ್ಥಹೀನವೂ ಆಯಿತಲ್ಲಾ!" ಎಂದು ಬಹುವಾಗಿ ಖೇದಗೊಳ್ಳುತ್ತಿದ್ದನು. ಪದ್ಮಾವತಿಯು "ನಾವಂತೂ ಯೌವನ ವನ್ನು ಕಳೆದುಕೊಂಡು ಮುಪ್ಪಿಗೆ ಕಾಲಿಡುತ್ತಿದ್ದೇವೆ. ಈಗಾಗಲೇ ಶರೀರದಲ್ಲಿ ಮಿತಿಯಿಲ್ಲದ ಆಲಸ್ಯ; ಭಾರ. ಮನಸ್ಸಿಗಂತೂ ನೆಮ್ಮದಿಯಿಲ್ಲ; ಈಗ ನಾವು ಯಾರಿಗೋಸ್ಕರ ಬಾಳಬೇಕೆಂಬ ದೊಡ್ಡ ಪ್ರಶ್ನೆ ಯೆದ್ದಿದೆ. ಅದೂ ಬಾಳು ಭಾರವಾಗಿರುವ ಈಗ ನಮ್ಮವರೆಂಬುವರು ಯಾರೂ ಇಲ್ಲ. ಯಾರಾದರೂ ಇದ್ದರೂ ಸಹ ಅವರಿಗೆ ನಮ್ಮ ಮೇಲೆ ಅಂಥ ಮಮತೆತಾನೇ ಏನು? ನಮ್ಮ ಹತ್ತಿರಿರುವ ಅಲ್ಪಸ್ವಲ್ಪ ಹಣದ ಮೇಲೆ ಮಮತೆಯಿರಬಹುದು! .... ಮುಂದೆ ನಾವಿನ್ನೂ ಮೆತ್ತಗಾಗುತ್ತ ಬಂದಾಗ ನಮಗೆ ಯಾರಾದಾರು? ದುಡ್ಡು ಕೊಟ್ಟು ಪ್ರೀತಿಯ ಸೇವೆಯನ್ನು ಕೊಳ್ಳಲು ಸಾಧ್ಯವೇ? .... ನಮ್ಮವನಾಗಿ ಒಬ್ಬ ಮಗನೋ, ಒಬ್ಬ ಮಗಳೋ ಇದ್ದಿದ್ದರೆ ನಮ್ಮ ಯೋಗಕ್ಷೇಮಕ್ಕಾಗಿ ನಮ್ಮಷ್ಟೇ ಮರುಗಿ ಶ್ರಮಿಸುತ್ತಿದ್ದರಲ್ಲವೆ? .... ಸೃಷ್ಟಿಯ ನಿಯಮವೇ ಇದು. ಹಿರಿಮರವು ನೆಲಕ್ಕುರುಳುವ ಮುನ್ನ ಹತ್ತು ಕಿರಿಮರಗಳನ್ನು ಬೆಳೆಸಿಬಿಟ್ಟು ತಾನುರುಳುವುದು. ಪಶುಪಕ್ಷಿ ಪ್ರಾಣಿಗಳೆಲ್ಲವೂ ತಮ್ಮ ಸಂತಾನದ ಯೋಗ ಕ್ಷೇಮಕ್ಕಾಗಿಯೇ ಶ್ರಮಿಸುತ್ತಿದ್ದು ಆ ಶ್ರಮವೇ ಅವಕ್ಕೆ ಆನಂದವಾಗಿ, ಸಂತಾನಕ್ಕಾಗಿ ಸಾಯುವುದೇ ಒಂದು ಮಹೋತ್ಸವವೆಂದು ಸುಖಿಸುವು ವಲ್ಲವೆ? ಮುಪ್ಪಿಗೆ ಬಂದ ತಂದೆತಾಯಿಗಳಿಗೆ ಮಕ್ಕಳಲ್ಲವೇ ಆಧಾರ? ಅವರೇ ಅಲ್ಲವೇ ಜೀವನ ಮರಣಗಳ ಶಾಂತಿ ಸಮಾಧಾನ? ಅವರೇ ಅಲ್ಲವೇ ತಂದೆತಾಯಿಗಳ ಮುಪ್ಪು ನೀಗುವರು! ಅವರೇ ಅಲ್ಲವೇ ಮರಣಾನಂತರ ಅವರ ದೇಹಗಳನ್ನು ಒಪ್ಪಮಾಡಿ, ಪೂಜ್ಯ ಭಾವನೆಯಿಂದ ನೆನೆಯುವರು? ಕೈಯಾರ ಈ ಅತ್ಯಗತ್ಯವಾದ ಸೌಭಾಗ್ಯದಿಂದ ವಂಚಿತರಾದಂತಾಯಿ ತಲ್ಲಾ?.... ನಾನಾದರೂ ಇರುವ ಹೊತ್ತಿಗಲ್ಲವೇ ನಮ್ಮ ತಂದೆಯ ಮುಪ್ಪು, ದುಃಖ ಸಂಕಟಗಳಿಲ್ಲದೇ, ಕಂಡವರ ಕೂಳಿಗೆ ಕೈಚಾಚದೆ, ಕರುಣೆಗೆ ಬಾಯಿ ಬಿಡದೆ ಗೌರವವಾಗಿ ನೀಗಿದ್ದು? ಇಲ್ಲದಿದ್ದರೆ ನಮ್ಮ ತಂದೆಯ ಗತಿಯೇನಾ ಗುತ್ತಿತ್ತು?" ಹೀಗೇ ಹಲವು ಬಗೆಯಾಗಿ ಅವಳ ಮನಸ್ಸು ಪಶ್ಚಾತ್ತಾಪದಿಂದ ಕುದಿಯತೊಡಗಿತ್ತು. ಇಬ್ಬರ ಮನಸ್ಸೂ ಒಂದೇ ವಿಚಾರಕ್ಕಾಗಿ ಪಶ್ಚಾತ್ತಾಪ

ಪಡುತ್ತಿದ್ದರೂ, ಪಶ್ಚಾತ್ತಾಪದ ಕಾರಣವು, ಕ್ರಮವೂ ಭಿನ್ನವಾಗಿದ್ದುವು. ಅರವಿಂದನು ತಾಯಿಯ ಸಾವು, ತಂದೆಯ ದೇಶಾಂತರ ಗಮನ, ಅಶೋಕನ ಗೃಹತ್ಯಾಗ, ತನ್ನ ಅರ್ಥಹೀನಜೀವನ ಇವೆಲ್ಲಕ್ಕೂ ತನ್ನೊಂದು ಮೂರ್ಖ ಹಠವನ್ನೇ ಕಾರಣವೆಂದು ಭಾವಿಸಿ, ಅದಕ್ಕಾಗಿ ಬಹಳ ಕುದಿಯುತ್ತಿದ್ದ. ಆದರೆ ಪದ್ಮಾವತಿಯು ಹೆಣ್ಣಿಗಿದ್ದ ಮಹಾ ಸೌಭಾಗ್ಯವಾದ, ಸೃಷ್ಟಿಯ ವರವಾದ ತಾಯಿತನವನ್ನು ಕೈಯಾರೆ ಕಳೆದುಕೊಂಡುದಕ್ಕಾಗಿ ಪಶ್ಚಾತ್ತಾಪ ಪಡುತ್ತಿದ್ದಳು. ಅಲ್ಲದೆ ತಾನು ಸಾಯುವವರೆಗೂ ತನ್ನ ಪತಿಯು ಆರೋಗ್ಯವಾಗಿರಲೆಂದು ಮಾತ್ರ ಬಯಸುತ್ತಿದ್ದಳು. ಈಗ ಗೃಹಕೃತ್ಯದ ನಿತ್ಯದ ನಿರ್ವಹಣೆ ಅವಳ ಮನಸ್ಸಿಗೆ ಬೇಜಾರಾಯಿತು. ಬ್ಯಾಂಕಿನಲ್ಲಿ ಕೂಡಿಟ್ಟಿದ್ದ ಸುಮಾರು ಆರುಸಾವಿರ ರೂಪಾಯಿನಷ್ಟು ಹಣವನ್ನೂ ಅರವಿಂದನ ಹೆಸರಿಗೆ ಬದಲಾಯಿಸಿ ತರಿಸಿ ಪಾಸ್‌ಬುಕ್‌ನ್ನು ಅವನ ಕೈಗೆ ಕೊಟ್ಟಳು. ಅರವಿಂದನು ಇದನ್ನು ನೋಡಿ ಕಂಬನಿದುಂಬಿದ. ಪದ್ಮಾವತಿಯ ಕೈಹಿಡಿದು-''ಪದ್ಮ! ಎಂಥ ಕೆಲಸಮಾಡಿದೆ !! ನಾನು ದುಡಿದ ಹಣವನ್ನು ನಿನ್ನ ಕೈಗೆ ಕೊಡುವುದು ಹಾಗಿರಲಿ; ನೀನು ದುಡಿದು ಕೂಡಿಟ್ಟಿದ್ದ ಹಣವನ್ನ ನನ್ನ ಕೈಗೆ ಹಾಕಿ ಕಣ್ಣೀರು ಕರಿಸುವೆಯಾ ?....ನನಗೇಕೇ ಹಣ ? ನಾನು ಸಂಪಾದಿಸುತ್ತಿರುವ ಹಣಕ್ಕೇ ಖರ್ಚಿಲ್ಲ!" ಎಂದು ಹೇಳುತ್ತಾ ಅವಳ ತಲೆಯನ್ನು ನೇವರಿಸಿ "ಆ ದಿನ ನೀನು ವೆಲ್ಲೂರಿನಲ್ಲಿ ಡಾಕ್ಟರರ ಮುಂದೆ 'ಈಗೊಂದು ವರುಷದಿಂದ ಈ ನಿರೋಧವನ್ನು ಪಯೋಗಿಸುತ್ತಿಲ್ಲ'ವೆಂದಾಗಲೇ ನನಗೆ ಜೀವ 'ಭಗ್' ಎಂದಿತು. ಹೊರಗಡೆಯೇ ಓಡಾಡಿಕೊಂಡಿರುವ ಗಂಡಸಾದರೂ, ಮನೆಗೆ ಬಂದು ಕುಳಿತಾಗ ಒಮ್ಮೊಮ್ಮೆ "ಮನೆಯಲ್ಲಿ ಒಂದು ಮಗುವಿದ್ದಿದ್ದರೇ ...." ಎಂದು ನನಗನ್ನಿಸುತ್ತಿತ್ತು. ನಿನಗೂ ಅದೇ ಅಭಿಲಾಷೆ ಮೂಡಿತ್ತೆಂದು ನನಗೆ ತಿಳಿದಿರಲಿಲ್ಲ. ಈಗ ಇಬ್ಬರಿಗೂ ಪರಸ್ಪರವಾಗಿ ಈ ಅಭಿಲಾಷೆಯಿದ್ದು ನಿರಾಶೆಯಾಗಿರುವುದರಿಂದ, ನಾವು ದೈವಿಕವಾದ ಯಾವುದಾದರೂ ದಾರಿಯನ್ನು ಹುಡುಕಬೇಕು'' ಎಂದು ಕಣ್ಣೀರೊರಸಿಕೊಂಡು ಹೇಳಿದ. ಅದಕ್ಕೆ ಪದ್ಮಾವತಿಯು ಅರವಿಂದನ ಕೈಹಿಡಿದು, "ಆರೋಗ್ಯವಿದ್ದು, ಕಾಲ ಮಿಂಚದಿದ್ದು, ದೇವರಿಗೆ ಹರಕೆಹೊತ್ತರೆ ಮಕ್ಕಳಾಗಬಹುದೇ ವಿನಃ, ಈಗ ಕೈಯಾರ ಮೊಟ್ಟೆಯನ್ನೊಡೆದು 'ಮರಿಯಾಗಲೆಂದು' ಬೇಡಿದರೆ ಹೇಗಾದೀತು !

ನಮ್ಮ ಅಜ್ಞಾನ ಭ್ರಮೆಗಳಿಗೆ ಇದೇ ತಕ್ಕ ಪ್ರಾಯಶ್ಚಿತ್ತ. ಅರುಣೋದಯದಂತೆ, ನೋಡುತ್ತಿರುವಂತೆಯೇ ಅರಿಹೋಗುವ ಯೌವ್ವನದ ಕೆಚ್ಚಿನಲ್ಲಿಟ್ಟ ಅನುಭವಿಗಳು-ಹಿತೈಷಿಗಳು ಬೇಡವೆಂದು ತಡೆದರೂ ಅವರ ಕೈಕೊಡವಿ ಹಠಮಾಡಿ ಇಟ್ಟ ತಪ್ಪು ಹೆಜ್ಜೆಗೆ ಪ್ರತಿಫಲವನ್ನು ಅನುಭವಿಸಲೇಬೇಕಲ್ಲಾ!...., ನನಗಂತೂ ನೀವೇ ತಂದೆ, ನೀವೇ ತಾಯಿ, ನೀವೇ ಅಣ್ಣ, ನೀವೇ ಗಂಡ-ನೀವೇ ದೇವರು-ನೀವೇ ಸಮಸ್ತವು; ನನಗೆ ನನ್ನ ಮೈಯೇ ಭಾರವಾಗಿ ಭಯವಾಗುತ್ತಿದೆ. ನನ್ನ ಈ ಸ್ಥಿತಿಯಲ್ಲಿ ನನ್ನನ್ನ ಕಾಪಾಡುವುದು ನಿಮ ಭಾರ. ನನ್ನ ಹಿಂದಿನ ನಡತೆಗಳನ್ನೆಲ್ಲಾ ಮರೆತುಬಿಡಿ! ನನ್ನ ತಪ್ಪುಗಳನ್ನೆಲ್ಲಾ ಕ್ಷಮಿಸಿಬಿಡಿ?" ಎಂದು ಅರವಿಂದನ ಪಾದಗಳನ್ನಪ್ಪಿ ಕಣ್ಣೀರಿಟ್ಟಳು. ಅರವಿಂದನು ಮಗುವಿನಂತೆ ಕಂಬನಿದುಂಬಿ ನಿಶ್ಚೇಷ್ಟಿತನಾಗಿ ಕುಳಿತುಬಿಟ್ಟಿದ್ದ.

* * *

ಮರುದಿನ ಮಧ್ಯಾಹ್ನ ಭಾನುವಾರವಾದ ಪ್ರಯುಕ್ತ ಅರವಿಂದನೂ ಪದ್ಮಾವತಿಯೂ ಎಲ್ಲೂ ಹೋಗದೆ ಮನೆಯಲ್ಲೇ ಕುಳಿತುಬಿಟ್ಟಿದ್ದರು. ಹೊರಗಡೆ ಗೇಟಿನ ಬಳಿ ಯಾವುದೋ ಗಾಡಿ ಬಂದು ನಿಂತಂತಾಯಿತು. ಅರವಿಂದನು ಎದ್ದುಬರುವ ವೇಳೆಗೆ ಹೊರಗಡೆಯಿಂದ "ಅಪ್ಪಾ" ಎಂದು ಕೂಗಿಕೊಂಡು ಬಾಲಕೃಷ್ಣ ಉರುಫ್ ಉರುಫ್ "ಪುಟ್‌ಟೂರಾವ್" ಓಡಿಬಂದು ಅರವಿಂದನ ಸೊಂಟವನ್ನಪ್ಪಿ ನಿಂತ. ಅರವಿಂದನಿಗೆ ಪರಮಾನಂದವಾಯಿತು; ಬಾಡಿದ್ದ ಮುಖ ಅರಳಿತು. "ಪುಟ್ಟೂ ಎಷ್ಟು ಎತ್ತರವಾಗಿಬಿಟ್ಟಿದ್ದಾನೆ?'' ಎಂದು ಅವನನ್ನೆತ್ತಿ ಮುದ್ದಿಸಿದ, "ನನಗೆ ಮುಂಚೆಕಾಣಪ್ಪಾ! ಅದಕ್ಕೇ ಅಮ್ಮಾ, ಅಣ್ಣಾ, ಚಿಕ್ಕಪುಟ್ಟೂ ಎಲ್ಲಾ ಬಂದಿದೀವಿ ನಿಮ್ಮ ಮನೆಗೇ" ಎಂದು ಗುಟ್ಟನ್ನೆಲ್ಲಾ ರಟ್ಟುಮಾಡಿಬಿಟ್ಟ. ಸ್ವಲ್ಪ ಹೊತ್ತಿನಲ್ಲೇ "ಚಿಕ್ಕಪುಟ್ಟು" ಕುಣಿಯುತ್ತಾ "ಅಪ್ಪಾ! ಚಾಕ್ಲೇಟೂ" ಎಂದು ಕೂಗಿಕೊಂಡು ಓಡಿಬಂದ. ಹಿಂದೆ ಅನ್ನಪೂರ್ಣ, ಅಶೋಕ ಇಬ್ಬರಿಬ್ಬರೂ ಬುಟ್ಟಿ, ಟಿಫಿನ್‌ಕ್ಯಾರಿಯರ್, ಥರ್ಮೋಸ್ ಪ್ಲಾಸ್ಕುಗಳನ್ನು ಹಿಡಿದು ಬಂದರು. "ಅಶೋಕನು ನಿಜವಾಗಿಯೂ ಭಾಗ್ಯಶಾಲಿ. ಸ್ವಲ್ಪ ಕೆಂಚಗೆ ಹುಟ್ಟಿದೆನೆಂದು ಅಮ್ಮನು ನನ್ನನೇ ಹೆಚ್ಚಾಗಿ ಮುದ್ದಿಸಿ 'ನೀನೇ ಅದೃಷ್ಟವಂತ!' ಎನ್ನು

ತ್ತಿದ್ದಳು. ಆದರೆ ಈ ನಂದಗೋಕುಲದಂಥ ತುಂಬು ಬಾಳು ನನ್ನ ಭಾಗ ಕ್ಕಿಲ್ಲವಾಯಿತು-ಇಲ್ಲ ಇಲ್ಲ-ನಾನೇ ಕೈಯಾರ ಕಳೆದುಕೊಂಡೆ" ಎಂದು ಯೋಚಿಸುತ್ತಿರುವಷ್ಟರಲ್ಲಿಯೇ ಅನ್ನಪೂರ್ಣೆಯು ಬಂದು, ಅಲ್ಲೇ ವೆರಾಂಡಾ ದಲ್ಲಿಯೇ ಅವನ ಪಾದಗಳಿಗೆ ತಲೆಯಿಟ್ಟು ನಮಸ್ಕರಿಸಿದಳು. ನಂತರ ಒಳಗಡೆಗೆ ಹೋಗಿ ಬಾಗಿಲಿನಲ್ಲಿ ನಿಂತಿದ್ದ ಪದ್ಮಾವತಿಯ ಪಾದಗಳಿಗೂ ನಮ ಸ್ಕರಿಸಿ ಪಾದ ಧೂಳಿಯನ್ನು ತಲೆಗೆ ಧರಿಸಿದಳು. ಪದ್ಮಾವತಿಯ ಅಂತಃಕರಣ ತುಂಬಿಬಂದಿತು. "ಕುಳಿತುಕೊಳ್ಳಿ" ಎಂದು ಕುರ್ಚಿತೋರಿಸಿದಳು; ಆದರೆ ಅನ್ನಪೂರ್ಣೆ ಎದುರಿಗೆ ಹಾಸಿದ್ದ ರತ್ನಕಂಬಳಿಯ ಮೇಲೆ ಹೋಗಿ ಕುಳಿತಳು. "ಹೆಣ್ಣು ಸೋತು ಗೆಲ್ಲುವ ರೀತಿ ಇದು; ನನ್ನಂತೆ ಸ್ಪೈಪೋಟಿಗೆ ನಿಂತರೆ ಸಂಸಾರದಲ್ಲಿ ಸುಖವೆಲ್ಲಿ !" ಎಂದುಕೊಂಡು ತಾನೂ ಅವಳ ಪಕ್ಕದಲ್ಲೇ ಕುಳಿತಳು. ಹೊರಗಡೆ ಮಾತನಾಡುತ್ತಿದ್ದ ಅರವಿಂದ ಅಶೋಕರಿಬ್ಬರೂ ಹುಡುಗರೊಂದಿಗೆ ಒಳಕ್ಕೆ ಬಂದು ಕುರ್ಚಿಯ ಮೇಲೆ ಕೂತರು. "ಪುಟ್ಟೂ ರಾವ್" ಅರವಿಂದನ ಪಕ್ಕದ ಕುರ್ಚಿಯಲ್ಲಿ ಕುಳಿತ. "ಚಿಕ್ಕಪುಟ್ಟೂ" ಮೆಲ್ಲಗೆ ಕುರ್ಚಿಯಿಂದ ಮೇಜನ್ನೇರಿ ಕೂತ.

**ಅಶೋಕ :** "ಅರವಿಂದ್ ! ಈ ದಿನ ಅನ್ನಪೂರ್ಣ 'ಭಾವನವರಿಗೆ ಬಹಳ ಇಷ್ಟಾ'ಂತ ಬಿಸಿಬೇಳೆ ಹುಳಿಯನ್ನ, ಒಗ್ಗರಣೆ ಮೊಸರನ್ನ, ಹೀರೇ ಕಾಯಿ ಬೋಂಡಾ ಮಾಡಿಕೊಂಡು ಬಂದಿದಾಳೆ. ನಿನಗಿಷ್ಟವಾದದ್ದು ಅತ್ತಿಗೇಗೂ ಇಷ್ಟತಾನೇ ? ಏನತ್ತಿಗೇ ?

**ಅರವಿಂದ್ :** ಅವಳಿಗೆ 'ಸ್ವೀಟ್' ತಿಂಡಿ ಹೆಚ್ಚಿಷ್ಟ.

**ಅಶೋಕ :** (ಅನ್ನಪೂರ್ಣೆಯ ಕಡೆಗೆ ತಿರುಗಿ ನಕ್ಕು) ಹಹ್ಹಾ ! ನಾನು ಮನೇಲೇ ಹೇಳಿಬಿಟ್ಟೆ. ಸಾಧಾರಣವಾಗಿ ಗಂಡನಿಗೆ ಇಷ್ಟವಾದದ್ದು ಹೆಂಡತಿಗೆ ಇಷ್ಟವಿರೊಲ್ಲಾಂತ !! ನಾನು ಹೇಳಿದ ಮೇಲೆ ಕೇಸರೀಭಾತ್ ಮಾಡಿದಳು.

**ಪದ್ಮಾವತಿ :** ಅವರು ಹಾಸ್ಯಕ್ಕೆ ಹೇಳುತಾರಷ್ಟೇ ಮಿಸ್ಟರ್ ಅಶೋಕ್ ! ನನಗೆ ಖಾರವೂ ಇಷ್ಟವೇ.

**ಚಿಕ್ಕಪುಟ್ಟೂ :** (ತಟ್ಟನೆ ಚಪ್ಪಾಳೆ ತಟ್ಟಿ) "ಅಣ್ಣನ ಹೆಸರು ಬರೀ ಬಿ. ಎ. ಅಶೋಕ್ ಅಂತ ಕಾಣ್ರೀ ದೊಡ್ಡಮ್ಮಾ ! ಮಿಸ್ಟರ್ ಅಶೋಕ್

ಅಲ್ಲಾ!" ಎಂದು ಹೇಳಿ ನಕ್ಕ .... ಅವನ ಯಜಮಾನಿಕೆಯ ಮಾತನ್ನು ಕೇಳಿ ಎಲ್ಲರೂ ನಕ್ಕರು. ಎಲ್ಲರೂ ನಕ್ಕದ್ದನ್ನ ಕಂಡು ಅವನು ಪೆಚ್ಚಾದ.

**ಅಶೋಕ :** ಅರವಿಂದ್! ಅತ್ತಿಗೆಮ್ಮಾ! ಅಮ್ಮನ ಇಷ್ಟದಂತೆ ಪುಟ್ಟೂಗೆ ಮುಂದಿನ ತಿಂಗಳು ಮುಂಜಿಮಾಡಬೇಕಾಗಿದೆ. ಮುಂಜೀನ ಗಾಣಗಾಪುರದಲ್ಲಿ ಗುರುಗಳ ಸನ್ನಿಧೀಲೇ ಮಾಡಬೇಕು-ಇವನು ಹಿರಿಯ ಮಗನಾಗಿರೋದರಿಂದ; ಮುಂಜೀಗೆ ಲಗ್ನ ಸಿಗೋದೇ ಕಷ್ಟ. ಅದಕ್ಕೋಸ್ಕರ ಈಗ ಜೋಯಿಸರಿಟ್ಟುಕೊಟ್ಟಿರೋ ಎರಡು ಲಗ್ನಗಳನ್ನೂ ಬಿಟ್ಟುಬಿಟ್ಟರೆ ಇನ್ನೆರಡುವರುಷ ಇವನ ಜಾತಕಕ್ಕೆ ಸರಿಹೋಗೋ ಲಗ್ನ ಸಿಗೋದಿಲ್ಲವಂತೆ.

**ಅರವಿಂದ್ :** ಈಗ ಅವರಿಟ್ಟು ಕೊಟ್ಟಿರೋ ಲಗ್ನದಲ್ಲೇ ಮಾಡಿ ಬಿಡೋಣೇಳು. ಯಾಕೆಬಿಡಬೇಕು.

**ಪದ್ಮಾವತಿ :** ನಿಮ್ಮ ಕೇಸ್‌ಊ, ಕಕ್ಷಿಗಾರರೂ, ಕೋರ್ಟೂ ರಜ ಕೊಡತಾರೇನೋ ನೋಡಿಕೊಳ್ಳಿ ಆಡೇಟ್‌ಗಳಿಗೆ.

**ಅರವಿಂದ್ :** ರಜಾಕೊಡದೇ ಹೋದರೆ ತಗೊಂಡುಬಿಡೋದು.

**ಪದ್ಮಾವತಿ :** ಅಂದರೇ ?

**ಅರವಿಂದ್ :** ಅಂದರೆ ಈ ಲಾಯರ್ ಕಸುಬನ್ನೇ ಬಿಟ್ಟುಬಿಡೋದು.

**ಪದ್ಮಾವತಿ ;** ಬಿಟ್ಟು ಬಿಟ್ಟೂ ?

**ಅರವಿಂದ್ :** ಬಿಟ್ಟುಬಿಟ್ಟು ಅಶೋಕನ ಹಾಗೆಲ್ಲಾದರೂ ಸ್ಕೂಲು ಮೇಷ್ಟರಾಗಿಬಿಡೋದು ಹಾಯಾಗಿ.

**ಪದ್ಮಾವತಿ :** ನಾನಿದ್ದು ನೋಡಿದನಲ್ಲಾ ಆ ಕಸುಬನ್ನೂ; ನೋಡಿ, ಒಬ್ಬರನ್ನೋಡಿ ಇನ್ನೊಬ್ಬರು 'ಅವರು ಹಾಯವಾಗಿದ್ದಾರೆ. ಇವರು ಹಾಯ ವಾಗಿದಾರೆ' ಅಂದುಕೊಳ್ಳೋದೇ ಹೊರತು ಎಲ್ಲಾ ಪ್ರೊಫೆಷನ್‌ಗಳಲ್ಲೂ ಕಷ್ಟ ಸುಖಗಳೆರಡೂ ಇದ್ದೇಇರುತ್ತವೆ.

**ಅಶೋಕ :** ಅತ್ತಿಗೇಮಾತೇ ಸರೀಂತ ನನಗನ್ನಿಸುತ್ತೆ.

**ಅರವಿಂದ್ :** ಈಗಿಡಿಸಿರೋ ಲಗ್ನಗಳು ಯಾವುವು ?

**ಅಶೋಕ :** ಮುಂದಿನ ತಿಂಗಳು ಎಂಟನೇ ತಾರೀಖು ಒಂದು ಲಗ್ನ; ಅದೇ ತಿಂಗಳು ಇಪ್ಪತ್ತೆರಡನೇ ತಾರೀಖು ಇನ್ನೊಂದು ಲಗ್ನ.

**ಅರವಿಂದ್ :** ಎಂಟನೇ ತಾರೀಖಿನ ಲಗ್ನವೇ ಅನುಕೂಲ. ಯಾಕೇಂದರೆ, ಇಪ್ಪತ್ತೆರಡನೇ ತಾರೀಖಾದರೆ ಆ ವೇಳೆಗೆ ಮಳೆ ಶುರುವಾಗಿ ಬಿಡುತ್ತೆ.

**ಪದ್ಮಾವತಿ :** ಲಾಯರುಗಳಿಗೆ ಜಿಯಾಗ್ರಫಿ ನಾಲೆಡ್ಜೂ ಸಾಕಷ್ಟು ಇರುತ್ತೇ !

**ಪುಟ್ಟೂ :** ನಮಗೂ ಜಾಗ್ರಫೀಲಿ ಹೇಳಿಕೊಟ್ಟಿದ್ದಾರೆ-ಮುಂದಿನ ತಿಂಗಳು ಮುಂಗಾರು ಮಳೇಂತ.

**ಅರವಿಂದ್ :** (ಪುಟ್ಟೂ ಬೆನ್ನುಚಪ್ಪರಿಸಿ) ಶೇಪ್ಸ್ಟು ಮಗ ! ಎಂದು ಹೇಳಿ ನಗುತ್ತಾ ಅನ್ನಪೂರ್ಣೆ ಕಡೆಗೆ ತಿರುಗಿ "ನಿಮ್ಮ ಮಕ್ಕಳಿಗೆ ಸಂಗೀತ ಕಲಿಸಿಲ್ಲವೇ ಅತ್ತಿಗೆಮ್ಮಾ?" ಎಂದು ಕೇಳಿದ. ಅನ್ನಪೂರ್ಣೆ ಕತ್ತೆತ್ತಿ ನೋಡಿ ಮುಗುಳ್ನಗೆ ನಕ್ಕು ಸುಮ್ಮನಾದಳು. ಚಿಕ್ಕಪುಟ್ಟು ತಟ್ಟನೆ ಬಾಯಿತೆಗೆದು "ಹೇಳಿಕೊಟ್ಟಿದಾಳಪ್ಪಾ. ನಂಗೆ, ಈ ಕರೀ ಪುಟ್ಟಂಗೇ, ಈ ಅಣ್ಣಂಗೇ ಮೂರು ಜನಕ್ಕೂ ಹೇಳಿಕೊಟ್ಟಿದಾಳೆ. ಹೇಳಲಾ? .... ಕೆರೆಯ ನೀರನು ಕೆರೆಗೆ ಚೆಲ್ಲಿ ಹರಿಭಜನೆ ಮಾಡಿ ದನಿಧಪ ನೀಸಮಾನಮವರು ?" ಎಂದು ಒಂದೆರಡು ರಾಗಗಳಲ್ಲಿ ತಪ್ಪು ತಾಳ ಹಾಕಿಕೊಂಡು ಕಛೇರಿ ಮಾಡೇಬಿಟ್ಟ. ಎಲ್ಲರೂ ಅವನು ಕುಳಿತಿದ್ದ ಠೀವಿ, ತಾಳಹಾಕುವ ರೀತಿ, ಆ ಗತ್ತುಗಳನ್ನು ನೋಡಿ ಗಹಗಹಿಸಿ ನಕ್ಕರು.

ಅನ್ನಪೂರ್ಣೆಯು ಒಳಕ್ಕೆದ್ದುಹೋಗಿ ಕೈಕಾಲು ತೊಳೆದುಕೊಂಡು ಬಂದು, ತಂದಿದ್ದ ಬಿಸಿಬೇಳೆ ಹುಳಿಯನ್ನು, ಒಗ್ಗರಣೆ ಮೊಸರನ್ನ, ಹೀರೇ ಕಾಯಿ ಬೋಂಡ, ಕೇಸರೀಭಾತ್‌ಗಳನ್ನು, ಬುಟ್ಟಿಯಲ್ಲಿ ತೊಳೆದು ಸುರುಳಿ ಮಾಡಿಟ್ಟಿದ್ದ ಬಾಳೆಎಲೆಯ ತುಂಡುಗಳಿಗೆ ಬಡಿಸಿ, ಎಲ್ಲರಿಗೂ ಕೊಟ್ಟಳು. ಪುಟ್ಟು, "ಅಮ್ಮಾ ! ನನ್ನ ಪಾಲಿನ ಕೇಸರಿಭಾತ್ ದೊಡ್ಡಮ್ಮನಿಗೆ ಕೊಟ್ಟು ಬಿಟ್ಟು, ಅವರ ಪಾಲಿನ ಬೋಂಡ ನನಗೆ ಕೊಟ್ಟುಬಿಡಮ್ಮಾ" ಎಂದ ಹಾಸ್ಯ ಮಾಡಿದ. ಪದ್ಮಾವತೀ ಅವನನ್ನು ಕರೆದು ತನ್ನ ಪಕ್ಕದಲ್ಲೇ ಕೂಡಿಸಿ ಕೊಂಡಳು. ಈ ಸಂತೋಷಕೂಟವನ್ನು ನೋಡಿ ಮನಸ್ಸಿನಲ್ಲೇ ಸಂತೋಷ ಪಡುತ್ತಿದ್ದ ಅರವಿಂದನ ಮನಸ್ಸು ತಟ್ಟನೆ ಮಂಕಾಯಿತು-"ಅಪ್ಪ ಅಮ್ಮ ಬದುಕಿದ್ದಿದ್ದರೇ .... !" ಎಂಬ ಯೋಚನೆ ಬಂದು.

೯

ಅಶೋಕನ ಮನೆಯ ಸಡಗರವೇ ಸಡಗರ. ಗಾಣಗಾಪುರಕ್ಕೆ ರೈಲಿನಲ್ಲಿ ಪ್ರಯಾಣ — ಮಕ್ಕಳಿಬ್ಬರೂ ಕುಣಿದಾಡುತ್ತಿದ್ದರು. "ಚಿಕ್ಕಪುಟ್ಟು" ಹಟ ಮಾಡಿಯಾನೆಂದು ಅಶೋಕನು ಇಬ್ಬರಿಗೂ ಒಂದೇ ತರಹದ ಕೋಟು ಗಳು, ಷರ್ಟುಗಳು, ನಿಕ್ಕರ್, ಟೋಪಿಗಳನ್ನು ಸಿದ್ಧಪಡಿಸಿದ್ದ. ಅಲ್ಲಿ ಅರವಿಂದನು ಬೇರೆ ಇಬ್ಬರಿಗೂ ಒಂದೊಂದು ಜೊತೆ ಷರ್ಟ್, ಕೋಟ್, ನಿಕ್ಕರ್‌ಗಳನ್ನು ಹೊಲಿಸಿಟ್ಟಿದ್ದ. ವೃದ್ಧ ರಾಮಾಜೋಯಿಸರು ರೈಲಿಗೆ ಹೊರಡುವ ಹಿಂದಿನ ರಾತ್ರಿ ಅಶೋಕನ ಮನೆಯಲ್ಲೇ ಮಲಗಿದ್ದರು. ಅನ್ನಪೂರ್ಣೆಯಂತೂ ರಾತ್ರಿಯೆಲ್ಲಾ ನಿದ್ದೆಯಿಲ್ಲದೆ, ಪ್ರಯಾಣದ ಕಾಲಕ್ಕೆ ಬೇಕಾದ ತಿಂಡೀ ತೀರ್ಥಗಳನ್ನೆಲ್ಲಾ ಅಣಿ ಮಾಡಿಕೊಳ್ಳುತ್ತಿದ್ದಳು. ಅಲ್ಲದೆ ಅಲ್ಲಿಗೆ ಬೇಕಾದ ಪೂಜಾ ಸಾಮಗ್ರಿ, ಬಟ್ಟೆಬರೆಗಳನ್ನೂ ಸಿದ್ಧಪಡಿಸಿಕೊಳ್ಳು ತ್ತಿದ್ದಳು. ಅರವಿಂದ ಪದ್ಮಾವತಿಯರು ಒಂದು ಪೆಟ್ಟಿಗೆ ಬಟ್ಟೆಗಳನ್ನೂ, ಕೈಲಿ ಐನೂರು ರೂಪಾಯಿಗಳನ್ನೂ ತೆಗೆದುಕೊಂಡು ಹೊರಟರು. ನಾಲ್ಕನೇ ತಾರೀಖಿನ ದಿನ ಎಲ್ಲರೂ ಕೂಡಿ ರೈಲು ಹತ್ತಿದರು. ದೂರ ಪ್ರಯಾಣವೆಂದು ಹೇಳಿ ಅಶೋಕನು ಚಿಕ್ ಇಂಟರ್‌ಕ್ಲಾಸ್ ಕಂಪಾರ್ಟ್‌ಮೆಂಟನ್ನು ರಿಜರ್ವ್ ಮಾಡಿಸಿದ್ದ. ಆದರೆ ಪದ್ಮಾವತಿಗೆ ಹಿಂಸೆಯಾದೀತೆಂದು ಅರವಿಂದ್ ತಮ್ಮಿ ಬ್ಬರಿಗಾಗಿ ಸೆಕೆಂಡ್ ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿ ರಿಜರ್ವ್ ಮಾಡಿಸಿ ಹೆಂಡತಿಯೊಂದಿಗೆ ಅಲ್ಲಿ ಕೂತ. ಈ ಎರಡು ಭೋಗಿಗಳಿಗೂ ಮಧ್ಯೆ ಮತ್ತೆ ಎರಡು ಭೋಗಿಗಳಿದ್ದರೂ 'ಪುಟ್ಟೂ' ರೈಲು ಪ್ಲಾಟ್‌ಫಾರಂ ಬಿಡುವುದಕ್ಕೆ ಮುಂಚಿನಿಂದ ಕಿಟಕಿಯಿಂದ ಅರವಿಂದನ ಗಾಡಿಯನ್ನೇ ನೋಡುತ್ತಿದ್ದ. ರೈಲು ಹೊರಟಮೇಲೆ ಅರವಿಂದನೂ ಒಮ್ಮೆ ಕಿಟಕಿಯಿಂದ ಹೊರಕ್ಕೆ ತಲೆ ಹಾಕಿದ. 'ಪುಟ್ಟು' ಮುಖವನ್ನು ನೋಡಿ ನಕ್ಕ. ಪುಟ್ಟುವಿಗೆ ಹೊಟ್ಟೆ ತುಂಬಿದಂತಾಯಿತು. ಆ ವೇಳೆಗೆ ಹೊರಕ್ಕೆ ತಲೆಯಿಟ್ಟ 'ಚಿಕ್ಕಪುಟ್ಟು' "ಓಹೋ! ಅಪ್ಪಾ! . . . . ಇಲ್ಲಿ ನೋಡೂ! ನಾನೂ, ಅಮ್ಮ, ಅಣ್ಣ ಪುಟ್ಟೂ ಎಲ್ಲಾ ಜೋಯಿಸರ ಮುಂಚೆಗೆ ಹೋಗುತಾ ಇದೇವೇ" ಅಂತ ಹಿಗ್ಗಿ ಕೂಗಿದ. ಎಲ್ಲರೂ ನಕ್ಕರು. ಅರವಿಂದನ ಹಿಂದೆ ತಲೆಯಿಟ್ಟು ನೋಡುತ್ತಿದ್ದ ಪದ್ಮಾವತಿಯು, "ಅಲ್ರೀ! ಇಬ್ಬರು ಹುಡುಗರ ಪೈಕಿ

ಒಬ್ಬನ್ನಾದರೂ ಇಲ್ಲಿ ಕರಕೋಬಾರದಾಗಿತ್ತೇ. ಮಿಟಮಿಟಾಂತ ನಾವಿಬ್ಬರೇ ಕೂತು ಇಲ್ಲಿ ಹ್ಯಾಗೆ ಹೊತ್ತು ಕಳೀಬೇಕು?" ಎಂದಳು. ಅದಕ್ಕೆ ಅರವಿಂದ, "ಯಾರನ್ನ ಕರೀಬೇಕಾಗಿತ್ತು? ದೊಡ್ಡೋನ್ನೋ ಚಿಕ್ಕೋನ್ನೋ?" ಎಂದು ಪ್ರಶ್ನಿಸಿದ. ಪದ್ಮಾವತಿ "ಚಿಕ್ಕೋನ್ನ" ಎಂದಳು. ಅರವಿಂದ "ಅದಕ್ಕೇ ಕರೀಲಿಲ್ಲ. ದೊಡ್ಡೋನು ಬರಲೀಂತ ನನಗಿಷ್ಟವಿತ್ತು. ಚಿಕ್ಕೋನು ಬರಲೀಂತ ನಿನಗಿಷ್ಟ. ಇಬ್ಬರನ್ನೂ ಕರೆಕೊಂಡರೆ ಅವರು ಬೇಜಾರು ಪಟ್ಟು ಕೊಂಡಾರೂಂತ ಸುಮ್ಮನಿದ್ದೆ" ಎಂದ. ಕ್ಷಣ ಕಾಲಾನಂತರ ಪದ್ಮಾವತಿಯು "ಅವರಿಬ್ಬರಲ್ಲಿ ಹಾಗೆ ಒಬ್ಬ ಮಗ ತಂದೆಗೆ, ಒಬ್ಬ ಮಗ ತಾಯಿಗೆ ಪ್ರಿಯ ವಾಗಿರೊಲ್ಲ ಅಲ್ಲವೇನ್ರೀ?" ಎಂದಳು. "ನಾನು ಏನು ಹೇಳಿದರೂ ಎಲ್ಲಾ ಬರೀ ಗೆಸ್ ವರ್ಕ್ ಆಗುತ್ತದೆ ಡಾರ್ಲಿಂಗ್" ಎಂದು ಸುಮ್ಮನಾದ. ರೈಲು ವೇಗ ಹೆಚ್ಚಲು ಮಕ್ಕಳಿಬ್ಬರೂ ಒಳಗೆ ಕೂತರು. ಇದನ್ನು ಕಂಡ ಅರವಿಂದನೂ ಒಳನುಖನಾದ.

* * * *

ಒಪ್ಪತ್ತಿನ ಪ್ರಯಾಣ ಸಾಗಿತ್ತು. ಮಕ್ಕಳು 'ಹಸಿವು' ಎಂದದ್ದರಿಂದ ಅನ್ನಪೂರ್ಣೆಯು ಎಲ್ಲರಿಗೂ ತಿಂಡಿ ತೀರ್ಥಗಳನ್ನು ಹಂಚಿ ಸಿದ್ಧ ಮಾಡಿದ್ದಳು. ಮುಂದಿನ ಸ್ಟೇಷನ್ನಲ್ಲಿ ರೈಲು ಸ್ವಲ್ಪ ಹೊತ್ತು ಹೆಚ್ಚಾಗಿ ನಿಲ್ಲುವುದೆಂದು ತಿಳಿದು ಎರಡು ತಟ್ಟೆಗಳ ತಿಂಡಿಯನ್ನು ಪುಟ್ಟುವಿನ ಕೈಗೆ ಕೊಟ್ಟು ರೈಲು ನಿಲ್ಲುತ್ತಲೇ ಅರವಿಂದನ ಕಂಪಾರ್ಟ್‌ಮೆಂಟ್‌ಗೆ ಕಳುಹಿಸಿದರು. ಪುಟ್ಟುವು ಎರಡು ತಟ್ಟೆಗಳನ್ನೂ 'ಅಪ್ಪ-ದೊಡ್ಡಮ್ಮನಿಗೆ' ಕೊಟ್ಟು ಹೊರಟುಬರುವುದ ರಲ್ಲಿದ್ದ. ಅಷ್ಟರಲ್ಲೇ ಅರವಿಂದನು ಅವನನ್ನು ಅಲ್ಲೇ ಕೂಡಿಸಿ, ಇಲ್ಲಿಗೆ ಬಂದು "ಅತ್ತಿಗೇ! ಪುಟ್ಟೂ ಅಲ್ಲೇ ಇರುತಾನೆ ನಮ್ಮ ಜೊತೇಲಿ. ಅವನ ಪ್ಲೇಟ್ ತಿಂಡೀನೂ ಇಲ್ಲಿ ಕೊಡೀ" ಎಂದು ತೆಗೆದುಕೊಂಡು ಬಂದು ಪುಟ್ಟು ವಿಗೆ ಕೊಟ್ಟು, ತಾನು ಪ್ಲಾಟ್‌ಫಾರಂನ ಹಣ್ಣಿನ ಅಂಗಡಿಗೆ ಹೋಗಿ, ಕಿತ್ತಲೇ ಹಣ್ಣುಗಳು, ಮಾವಿನ ಹಣ್ಣುಗಳು, ಪೈನಾಪಲ್‌ಗಳು, ರಸಬಾಳೆ ಹಣ್ಣುಗಳನ್ನು ಮಂಕರಿಗೆ ಹಾಕಿಸಿ ತಂದು, ಹೆಚ್ಚು ಭಾಗವನ್ನು ಅರವಿಂದನ ಕಂಪಾರ್ಟ್‌ಮೆಂಟಿನಲ್ಲಿಡಿಸಿ, ಮಕ್ಕಳನ್ನು ತನ್ನಲ್ಲಿಗೆ ತೆಗೆಸಿಕೊಂಡು ಹೋದ. ರೈಲು ಹೊರಡುವುದಕ್ಕೆ ತಡವಾದ ಕಾರಣ ತಿಂಡೀ ತೀರ್ಥ ಎಲ್ಲಾ ರೈಲು

ಹೊರಡುವುದಕ್ಕೆ ಮುಂಚೆಯೇ ಮುಗಿದಿಯಲು ಪ್ಲೇಟು ಲೋಟ ಗಳನ್ನು ಹಿಂತಿರುಗಿಸಲು ಅರವಿಂದನೇ ಇತ್ತ ಬಂದ. ಆಗ 'ಚಿಕ್ಕಪುಟ್ಟ' ಅರವಿಂದನನ್ನು ಕುರಿತು, "ಅಪ್ಪಾ! ಪುಟ್ಟು ಅಲ್ಲೇ ಇರುತಾನೇ?" ಎಂದು ಪ್ರಶ್ನಿಸಿದ. ಅರವಿಂದನು "ಹೌದೂ" ಎಂದಿದ್ದಕ್ಕೆ, "ನಾನೂ ಅಲ್ಲಿಗೇ ಬರಲೇನಪ್ಪಾ?" ಎಂದು ಆಶೆಯಿಂದ ಕೇಳಿದ. ಅರವಿಂದ "ಬಾ! ಬಾ! ಸಂತೋಷವಾಗಿ ಬಾ!" ಎಂದು ಅವನನ್ನೂ ಕರೆದುಕೊಂಡುಹೋದ. ಸ್ವಲ್ಪ ಹೊತ್ತಿನ ಮೇಲೆ ಅನ್ನಪೂರ್ಣೆ ಗಂಡನನ್ನು ಕುರಿತು "ಭಾವನೋರಿಗೆ ಮಕ್ಕ ಳೆಂದರೆ ಮುಂಚಿಂದ ಪ್ರಾಣ. ಪುಟ್ಟೂ ಕಂಡರಂತೂ ನಮಗಿಂತ ಹೆಚ್ಚಾಗಿ ಒದ್ದುಗೋತಾರೆ" ಎಂದಳು. ಆದಕ್ಕೆ ಅಶೋಕ "ಅತ್ತಿಗೇಗೆ ಚಿಕ್ಕೋನ್ನ ಕಂಡರೆ ಬಹಳ ಪ್ರೀತಿ" ಎಂದು ಸುಮ್ಮನಾದ. ಸ್ವಲ್ಪ ಹೊತ್ತಿನ ಮೇಲೆ ಅನ್ನಪೂರ್ಣೆ ರೈಲು ಹೊರಟಿದ್ದನ್ನು ಕಂಡು ಜೋಯಿಸರ ಕಡೆ ನೋಡಿದಳು. ಸೆಕೆಗೆ ಅವರು ಗೊರಕೆಹೊಡೀತಿದ್ದರು. "ಅಲ್ಲಾಂದ್ರೇ! ಪಾಪ! ಅವರಿ ಗೊಂದೆರಡು ಮಕ್ಕಳಾಗಬಾರದಾಗಿತ್ತೇ?" ಎಂದಳು. ಅಶೋಕ "ಆದ ಮೇಲೆ ಸಾಕಿ ಬೆಳಸೋ ಕಷ್ಟಕ್ಕೆ ಹೆದರಿ ಬಿಟ್ಟಿರಬೇಕು" ಎಂದು ಸುಮ್ಮನಾದ. ಅನ್ನಪೂರ್ಣೆಗೆ ಈ ಮಾತುಗಳು ಅಷ್ಟು ಸ್ಪಷ್ಟವಾಗಿ ಅರ್ಥವಾಗಲಿಲ್ಲ; ಪುತ್ತೆ ಪ್ರಶ್ನಿಸುವುದು ಸರಿಯಲ್ಲವೇನೋ ಎಂದು ಸುಮ್ಮನಾದಳು.

ಅಲ್ಲಿ "ಪುಟ್‌ಟೂ ರಾವ್" ಸಂಗೀತ ಕಛೇರಿ ನಡೆಯುತ್ತಿತ್ತು. ನಂತರ ಅವನ ತಮ್ಮನ ಕಲಸು ಮೇಲೋಗರದ ಹಾಡುಗಾರಿಕೆ. ಒಂದರ್ಧ ಗಂಟೆಗೆ ಇಬ್ಬರೂ ಆಕಳಿಸಿದರು. ಆಮೇಲೆ ದೊಡ್ಡವನು ಅರವಿಂದನ ತೊಡೆಯ ಮೇಲೂ, ಚಿಕ್ಕವನು ಪದ್ಮಾವತಿಯ ತೊಡೆಯ ಮೇಲೂ ನಿರಾ ತಂಕವಾಗಿ ನಿದ್ದೆ ಹೋಗಿಬಿಟ್ಟರು. ನಂತರ ಪದ್ಮಾವತಿಯು ತೊಡೆಯ ಮೇಲೆ ಮಲಗಿದ್ದ ಚಿಕ್ಕವನ ತಲೆಯನ್ನು ನೇವರಿಸುತ್ತಾ ಅರವಿಂದನನ್ನು ಕುರಿತು "ಏನ್ರೀ! ಕ್ಷೇತ್ರಗಳಲ್ಲಿ ಹರಕೆ ಮಾಡಿಕೊಂಡರೆ ಮಕ್ಕಳಾಗುತ್ತಂತೆ ಹೌದೇ?" ಎಂದು ಪ್ರಶ್ನಿಸಿದಳು. ಅರವಿಂದನು ಕನಿಕರಗೊಂಡು "ಹೌದು ಪದ್ಮ, ಹಾಗೇಂತ ಹೇಳುತಾರೆ" ಎಂದ. ಪದ್ಮಾವತಿಯು ಆಶೆಯಿಂದ "ಹೇಗೂ ಗಾಣಗಾಪುರಕ್ಕೆ ಹೋಗುತಾ ಇದೀವಿ. ಅಲ್ಲಿಯೂ ಹರಕೆ ಮಾಡಿ ಕೊಳ್ಳೋಣ. ಅಲ್ಲಿಂದ ಪಂಡರಾಪುರಕ್ಕೆ ಹೋಗಿ ಅಲ್ಲಿಯೂ ಹರಕೆ ಮಾಡಿ

ಕೊಳ್ಳೋಣ. ಹಾಗೇ ಬಾದಾಮಿಗೆ ಹೋಗಿ ಬನಶಂಕರಿಗೂ ಹರಕೆ ಮಾಡಿ ಕೊಂಡು ನೋಡೋಣ—ನಮಗೂ ಏನಾದರೂ ಒಂದು ಗಂಡು ಮಗು ವಾದೀತೇನೋ" ಎಂದಳು. ಅರವಿಂದನ ಕರುಳು 'ಚುರಕ್' ಎಂದಿತು. ನುಗ್ಗಿ ಬಂದ ಕಣ್ಣೀರನ್ನು ತಡೆದು "ಹಾಗೇ ಆಗಲೀ ಪದ್ಮ! ಹರಕೆ ಮಾಡಿಕೊಳ್ಳೋಣ" ಎಂದು ಹಾಗೆ ಕಣ್ಣು ಮುಚ್ಚಿ ನಿದ್ದೆಹೋದ. ಪದ್ಮಾ ವತಿಗೆ ನಿದ್ದೆ ಬಾರದು. ಏನೋ ಆಸ್ತಿಯನ್ನು ಕಳೆದುಕೊಂಡವಳಂತೆ ಮನಸ್ಸಿನಲ್ಲೇ ಸಂಕಟಪಡುತ್ತಿದ್ದಳು.

* * * * *

ನಾಲ್ಕು ದಿವಸಗಳ ನಂತರ ಮುಂಜಿಯ ಕೆಲಸವೆಲ್ಲಾ ಮುಗಿದು ಅಶೋಕ ಅನ್ನಪೂರ್ಣೆಯರು ಗುರುಗಳ ಅಪ್ಪಣೆಗಾಗಿ ಕಾದಿದ್ದರು. ಪದ್ಮಾ ವತಿಯು "ಗುರುಗಳೇ ಬಂದು ಅಪ್ಪಣೆ ಹೇಗೆ ಕೊಡುತಾರೇ?" ಎಂದು ಪ್ರಶ್ನಿಸಿದಳು. ಅಲ್ಲಿಗೆ ಹೋದ ಮೇಲೇ ಅವಳೂ ಸಹ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದಳು. ಅವಳ ಪ್ರಶ್ನೆಗೆ ಅರವಿಂದನು "ಗುರುಗಳು ಅವರ ಕನಸಿನಲ್ಲಿ ಬಂದು ದರ್ಶನ ಕೊಟ್ಟು 'ನೀವು ಹೋಗಿಬನ್ನಿ' ಅಂತ ಹೇಳ ಬೇಕು. ಅದುವರೆಗೂ ಅವರು ಕದಲುವ ಹಾಗಿಲ್ಲ" ಎಂದು ಹೇಳಿದ. ಅಂತೂ ಅರವಿಂದ ಪದ್ಮಾವತಿಯರಿಬ್ಬರೂ ಮಕ್ಕವರನ್ನು ಗಾಣಗಾಪುರದಲ್ಲೇ ಬಿಟ್ಟು ಮುಂದಕ್ಕೆ ಪ್ರಯಾಣ ಮಾಡಿಬಿಟ್ಟರು. ಇತ್ತ ಅಶೋಕ ಅನ್ನಪೂರ್ಣೆ ಯರು ನಿತ್ಯವೂ ಐದು ಗಂಟೆಗೇ ಎದ್ದು, ಭೀಮಾನದಿಯಲ್ಲಿ ಮಿಂದು, ಒದ್ದೆ ಯುಟ್ಟು ಹೆಜ್ಜೆ ನಮಸ್ಕಾರಾದಿಗಳನ್ನು ಹಾಕಿ, ನಂತರ ಮಡಿಯುಟ್ಟು ಪೂಜಾದಿಗಳನ್ನು ಮಾಡುತ್ತಾ ಮುಂದೆ ನಾಲ್ಕು ದಿನಗಳು ಅಲ್ಲೇ ಇದ್ದರು. ಆ ದಿನ ಬೆಳಗಿನಜಾವ ಮೂರುಗಂಟೆಯ ಸಮಯದಲ್ಲಿ ಮಕ್ಕಳನ್ನು ಮಲಗಿಸಿ ಕೊಂಡು ಮಲಗಿದ್ದ ಅಶೋಕ ಮತ್ತು ಅನ್ನಪೂರ್ಣೆಯರಿಬ್ಬರ ಕನಸಿನಲ್ಲೂ ಒಂದೇ ಕಾಲದಲ್ಲಿ ಗುರುಗಳು ಜಟಾ ದಂಡಕಮಂಡಲಾದಿಗಳನ್ನು ಧರಿಸಿ ಪಾದುಕೆಗಳನ್ನು ಮೆಟ್ಟಿ "ಪಟ್! ಪಟ್!" ಎಂದು ನದಿಯ ಕಡೆಯಿಂದ ಬಂದು "ಮಕ್ಕಳೇ! ನಿಮ್ಮ ಸೇವೆ ಪೂರ್ಣವಾಯಿತು. ನೀವು ಮಕ್ಕಳೊಂದಿಗೆ ಊರಿಗೆ ಹಿಂದಿರುಗಿ. ನಿಮ್ಮ ಮನೆಯಲ್ಲಿ ಈ ವರುಷ ಅನುಸೂಯೆಯು ಜನಿಸುವಳು" ಎಂದು ಹೇಳಿ ಮಾಯವಾದಂತಾಯಿತು. ಆನಂದಪುಳಕಿತ

ಳಾದ ಅನ್ನಪೂರ್ಣೆಯು ತಟ್ಟನೆದ್ದು, ಅಶೋಕನ ಬಳಿಗೆ ಬಂದು ನೋಡಿದಳು. ಅವನಿಗೆ ಎಚ್ಚರವಾಗಿರಲಿಲ್ಲ. ತನಗೆ ಅಪ್ಪಣೆಯಾದ ಮಾತುಗಳು ಎಲ್ಲಿ ಮರೆತುಹೋದಾವೋ ಎಂದು ತಟ್ಟನೆ ಪೆಟ್ಟಿಗೆಯಿಂದ ತನ್ನ ಸ್ತೋತ್ರದ ಪುಸ್ತಕವನ್ನು ತೆಗೆದು ಅದರಲ್ಲಿ ಚಾಚೂ ತಪ್ಪದಂತೆ ಬರೆದಿಟ್ಟಳು. ಅವಳಿಗಾದ ಆನಂದದಲ್ಲಿ ಮತ್ತೆ ನಿದ್ದೆ ಬರುವಂತಿರಲಿಲ್ಲ. ಗಂಡನ ಮಗ್ಗುಲಲ್ಲೇ ಕಣ್ಮುಚ್ಚಿ ಕುಳಿತಿದ್ದಳು. ಸ್ವಲ್ಪ ಹೊತ್ತಿನಲ್ಲೇ ಅಶೋಕನು "ಅನ್ನಪೂರ್ಣಾ! ಅನ್ನಪೂರ್ಣಾ!" ಎಂದು ಕನವರಿಸಿಕೊಂಡನು. ಅನ್ನಪೂರ್ಣೆಯು ತಟ್ಟನೆ ಗಂಡನನ್ನು ಮುಟ್ಟಿ ಎಬ್ಬಿಸಿದಳು. ಎಚ್ಚರಗೊಂಡ ಅಶೋಕನು ಅನ್ನಪೂರ್ಣೆಯ ಕೈಹಿಡಿದು "ಅನ್ನಪೂರ್ಣೆ! ಗುರುಗಳು ಅಪ್ಪಣೆ ಕೊಡಿಸಿದರು! ಗುರುಗಳು ಅಪ್ಪಣೆ ಕೊಡಿಸಿದರು! . . . . ಆದರೆ! . . . ." ಎಂದು ಸುಮ್ಮನಾಗಿ ಬಿಟ್ಟ. ಇದನ್ನು ಕಂಡ ಅನ್ನಪೂರ್ಣೆಯು ಖಿನ್ನಳಾಗಿ "ಏನದು? . . . . . . ಏನು? . . . . . . ಏನು ಹೇಳಿಬಿಡಿ" ಎಂದು ಅಂಗಲಾಚಿದಳು. ಅಶೋಕನು ನಾಚಿ "ಏನೂ ಇಲ್ಲ . . . . . ಈ ವರುಷ . . . . . ಪುಟ್ಟೂಗೆ . . . ತಂಗಿ ಹುಟ್ಟುತ್ತಾಳಂತೆ" ಎಂದು ಹೇಳಿ ಅನ್ನಪೂರ್ಣೆಯ ಕೈ ಹಿಸುಕಿದ. ಅನ್ನಪೂರ್ಣೆಯು ಆಶ್ಚರ್ಯದಿಂದ ಪೆಟ್ಟಿಗೆಯನ್ನು ತೆಗೆದು ತಾನು ಬರೆದಿಟ್ಟಿದ್ದನ್ನು ತೆಗೆದು ತೋರಿಸಿದಳು. ಅಶೋಕನಿಗೆ ಪರಮಾಶ್ಚರ್ಯವಾಯಿತು. ಅದನ್ನು ಕಣ್ಣಿಗೊತ್ತಿಕೊಂಡು ಅಲ್ಲಿಂದೆದ್ದು, ಸ್ನಾನಕ್ಕೆ ಸಿದ್ಧರಾಗಿ, ಜೋಯಿಸರನ್ನೂ, ಮಕ್ಕಳನ್ನೂ ಎಬ್ಬಿಸಿಕೊಂಡು, ನದಿಗೆ ಹೋಗಿ ಸ್ನಾನಾದಿಗಳನ್ನು ಮುಗಿಸಿಕೊಂಡು, ವಿಶೇಷ ಪೂಜಾದಿಗಳನ್ನು ನೆರವೇರಿಸಿಕೊಂಡು, ತೀರ್ಥಪ್ರಸಾದಗಳನ್ನು ತೆಗೆದುಕೊಂಡು ಊರಿಗೆ ಹೊರಟುಬಿಟ್ಟರು.

* * * * *

ಅತ್ತ ಅರವಿಂದ ಪದ್ಮಾವತಿಯರಿಬ್ಬರು ಪಂಡರಾಪುರ, ಬಾದಾಮಿಗಳೇ ಅಲ್ಲದೆ ದಾರಿಯಲ್ಲಿ ಸಿಕ್ಕಿದ ಇನ್ನೂ ನಾಲ್ಕಾರು ಕ್ಷೇತ್ರಗಳನ್ನು ಸುತ್ತಿಕೊಂಡು ಹೋದೆಡೆಯಲ್ಲೆಲ್ಲಾ ಯಥೇಷ್ಟವಾಗಿ ಪೂಜಾದಿಗಳನ್ನು ಮಾಡಿಸಿ ಬಡಬಗ್ಗರಿಗೆ ಆಣೆಗಳನ್ನು ಹಂಚುತ್ತಾ, ಕಡೆಗೆ, ಹಳ್ಳಿಗಳಲ್ಲಿ ಸುತ್ತಿದ ಬೇಸರಿಕೆಯನ್ನು ಕಳೆದುಕೊಳ್ಳುವ ಉದ್ದೇಶದಿಂದ ಬೊಂಬಾಯಿಗೆ ಬಂದರು. ಅಲ್ಲಿ ಐದಾರು ದಿವಸಗಳು ಅಲೆದಾಡುತ್ತಿದ್ದು, ಮಕ್ಕಳಿಬ್ಬರಿಗೆಂದು ಆಟದ

ಸಾಮಾನುಗಳನ್ನು ಕೊಂಡುಕೊಂಡು, ಊರಿಗೆ ಹಿಂದಿರುಗಬೇಕೆಂದು ತೀರ್ಮಾನಿಸಿ, ಆ ದಿನವೇ ಹೊರಟು ಕೊಲ್ಲಾಪುರಕ್ಕೆ ಬಂದರು. ಅಲ್ಲಿ ಅರವಿಂದನ ಬಿ.ಎಲ್. ತರಗತಿಯ ಮಿತ್ರನೊಬ್ಬನಿದ್ದ. ಅವನ ಮನೆಯಲ್ಲೊಂದು ದಿನವಿದ್ದರು; ಊರನ್ನೆಲ್ಲಾ ನೋಡಿಕೊಂಡು ಮನೆಗೆ ಹಿಂದಿರುಗಿದರು. ಆದಿನ ರಾತ್ರೆ ಊಟವಾದ ಮೇಲೆ ಗಂಡಹೆಂಡಿರಿಬ್ಬರೂ ಹಾಗೆ ತಿರುಗಾಡುತ್ತಾ ಮಾತನಾಡುತ್ತಾ ಬರುತ್ತಿದ್ದರು. ಸೆಕೆಯಾಗಿದ್ದ ಕಾರಣ ಇವರಂತೆಯೇ ಇನ್ನೂ ಕೆಲವರು ರಸ್ತೆಯಲ್ಲಿ ತಿರುಗಾಡುತ್ತಿದ್ದರು. ಸ್ನೇಹಿತನು ದೇಹಾಲಸ್ಯದ ಪ್ರಯುಕ್ತ ಮನೆಯಲ್ಲೇ ಉಳಿದುಕೊಂಡಿದ್ದ. ಹಾದಿಯಲ್ಲಿ ಬರುತ್ತಾ ಅರವಿಂದನು "ಪದ್ಮಾ! ನಮ್ಮ ಪ್ರವಾಸವೇನೋ ಮುಗಿದಂತಾಯಿತು. ಇನ್ನೂ ಊರಿಗೆ ಹೋಗಿ ನಿಶ್ಚಿಂತೆಯಾಗಿರಬಹುದು." ಎಂದ. ಪದ್ಮಾವತಿಯು "ನಿಶ್ಚಿಂತೆಯೆಲ್ಲಿಂದ ಬಂತು? ಇಷ್ಟು ಕ್ಷೇತ್ರಗಳನ್ನೆಲ್ಲಾ ತಿರುಗಿ ಹರಕೆ ಹೊತ್ತು ಬಂದಿದೇವೆ. ನೋಡೋಣ, ದೇವರು ನಮಗೆ ಒಂದಾದರೂ ಮಗುವನ್ನ ಕೊಟ್ಟಾನೋ ಇಲ್ಲ ಹೀಗೆ ನಮ್ಮ ಜೀವನ ಮರ ಹುಟ್ಟಿ ಮರ ಬೆಳೆದು ಮರ ಬಿದ್ದಷ್ಟೇ ಸಾರ್ಥವಾಗುತ್ತೇನೋ!" ಎಂದು ಬಿಸು ಸುಯ್ದಳು. ಇವರನ್ನು ಯಾರೋ ಹಿಂಬಾಲಿಸಿ ಬರುತ್ತಿದ್ದಂತೆ ಕಂಡು ಬಂದದ್ದರಿಂದ, ಮುಂದೆ ಹೋಗದೆ ಮನೆಗೆ ಹಿಂದಿರುಗಿಬಿಟ್ಟರು. ಕತ್ತಲಾಗಿ ಮೋಡವೂ ಮುಚ್ಚಿದ್ದರಿಂದ ತಮ್ಮ ಹಿಂದೆಯೇ ಮನೆಯ ಗೇಟಿನವರೆಗೂ ತಮ್ಮನ್ನು ಹಿಂಬಾಲಿಸಿ ಹೋದಂತಾಯಿತಲ್ಲಾ ಅವರು ಯಾರೆಂದು ಅರಿಯಲಾಗಲಿಲ್ಲ. ಇವರೂ ಅಷ್ಟು ಗಮನಕೊಡಲಿಲ್ಲ.

* * *

ಮರುದಿನ ಬೆಳಗಾಗುವ ಮುಂಚೆಯೇ ಅವರು ಮಲಗಿದ್ದ ಕೋಣೆಯ ಬಾಗಿಲ ಹೊರಗೆ ಮಗು ಉಸಿರು ಕಟ್ಟಿ ಅಳುತ್ತಿರುವ ಸದ್ದು ಕೇಳಿಸಿತು. ಪದ್ಮಾವತಿಗೆ ಮೊದಲು ಎಚ್ಚರವಾಯಿತು ತಟ್ಟನೆ ಗಂಡನನ್ನೆಬ್ಬಿಸಿ ವಿಚಾರವನ್ನು ತಿಳಿಸಿದಳು. ಅರವಿಂದನು ಮೊದಲು ಹೆಂಡತಿಯ ಭ್ರಮೆಯೆಂದುಕೊಂಡವನು, ಅಳುವು ಜೋರಾಗುತ್ತಲೂ ತಾನೇ ಎದ್ದು ದೀಪವನ್ನು ದೊಡ್ಡದು ಮಾಡಿ ಬಾಗಿಲು ತೆರೆದ; ತನ್ನ ಕಣ್ಣುಗಳನ್ನು ತಾನೇ ನಂಬದಾದ. ಸುಮಾರು ಏಳೆಂಟು ತಿಂಗಳ ಗಂಡು ಮಗು ಲಕ್ಷಣವಾಗೇನೋ

ಇದೆ. ಆದರೆ ಹೊಟ್ಟೆಗಿಲ್ಲದೆ ಸೊರಗಿದಂತಿದೆ. ಮೈಮೇಲೊಂದು ಬಟ್ಟೆ ಸಹಾ ಇಲ್ಲ. ಕೆಳಗಡೆ ಒಂದು ರಟ್ಟಿನ ಮೇಲೆ ಮಲಗಿ ಗಟ್ಟಿಯಾಗಿ ಅಳುತ್ತಿದೆ. ಪದ್ಮಾವತಿಗೆ ಆನಂದಾಶ್ಚರ್ಯಗಳು ಮಿತಿಮೀರಿ ಹೊರಗೆ ನುಗ್ಗಿ "ಮಗುವನ್ನೆತ್ತಿಕೊಂಡು ಸಮಾಧಾನಪಡಿಸತೊಡಗಿದಳು. ಆದರೆ ಅರವಿಂದನು 'ಸ್ವಲ್ಪ ತಡೀ ಪದ್ಮಾ!' ಎಂದು ಹೇಳಿ, ಮನೆಯ ಆಳು 'ವಿಠೂ'ವನ್ನೆಬ್ಬಿಸಿ ದೀಪವನ್ನು ಹಿಡಿದು ಮನೆಯ ಸುತ್ತಲೂ, ನಂತರ ರಸ್ತೆಯುದ್ದಕ್ಕೂ ಅತ್ತ ಇತ್ತಲೆಲ್ಲಾ ಹುಡುಕಾಡಿದ. ಆದರೆ ಯಾರ ಸುಳಿವೂ ಕಾಣಿಸಲಿಲ್ಲ. ಮನೆಗೆ ಹಿಂದಿರುಗಿ ಆಶ್ಚರ್ಯ ಚಕಿತನಾಗಿ ಕುಳಿತ. ಮಿತ್ರನ ಮನೆಯವರೆಲ್ಲರೂ ಎದ್ದು ವಿಚಾರವನ್ನು ತಿಳಿದು ಆಶ್ಚರ್ಯಪಟ್ಟರು. ಪದ್ಮಾವತಿಯ ಮನಸ್ಸಿನಲ್ಲೇನೋ "ನನಗಂತೂ ಇನ್ನೂ ಮಕ್ಕಳಾಗುವಂತಿಲ್ಲವಲ್ಲಾ! ಏನೋ ಈ ಪಾಪಿಯ ಬೇಡಿಕೆಯನ್ನು ಕೇಳಿ ದೇವರೇ ಬೆಳೆದ ಮಗುವನ್ನು ತಂದುಕೊಟ್ಟಿರಬೇಕು. ಕ್ಷೇತ್ರಗಳಲ್ಲೆಲ್ಲಾ ಖರ್ಚು ಮಾಡಿದ ನೂರಾರು ರೂಪಾಯಿ ನಿಷ್ಫಲವಾದೀತೇ!" ಎಂದು ತಿಳಿದು ಸಂತೋಷಪಡುತ್ತಿದ್ದಳು. ಆದರೆ ಅರವಿಂದನು "ನೆನ್ನೆ ರಸ್ತೆಯಲ್ಲಿ ನಾವು ಮಾತಾಡಿಕೊಂಡು ಬರುತ್ತಿದ್ದಾಗ ಕತ್ತಲಲ್ಲಿ ಯಾರೋ ನಮ್ಮಿಂದ ತುಸು ದೂರದಲ್ಲಿ ಬರುತ್ತಿದ್ದಂತಿದ್ದಿತಲ್ಲಾ....ಅವರೇ ಯಾರೋ 'ಸಾಕಿಕೊಳ್ಳಿ' ಅಂತ ತಂದಿಟ್ಟಿರಬೇಕು" ಎಂದುಕೊಂಡದ್ದೇ ಅಲ್ಲದೆ, ಅದೇ ಅಭಿಪ್ರಾಯವನ್ನೇ ಪದ್ಮಾವತಿಗೆ ಹೇಳಿದ. ಆದರೆ ಅವಳು ನಂಬಲಿಲ್ಲ. ಅಳುತ್ತಿರುವ ಮಗುವಿಗೆ ಮಿತ್ರನ ಹೆಂಡತಿಯೇ ಎತ್ತಿಕೊಂಡು ಹಾಲು ಕುಡಿಸಿದಳು. ಮಗು ಸುಮ್ಮನಾಯಿತು. ಪದ್ಮಾವತಿಯು ಎತ್ತಿಕೊಂಡು ತೊಡೆಯ ಮೇಲೆ ಮಲಗಿಸಿಕೊಂಡಳು. ಸ್ವಲ್ಪ ಹೊತ್ತಿನಲ್ಲೇ ಕಣ್ಮುಚ್ಚಿ ನಿದ್ರಿಸಿತು.

ಮರುದಿನವೇ ರೈಲು ಹತ್ತಿದರು. ಸೆಕೆಂಡ್ ಕ್ಲಾಸ್‌ನಲ್ಲಿ ಕುಳಿತರು. ಆದರೆ ಮಗುವು ಒಂದೇ ಸಮನೆ ಅಳುತ್ತಿತ್ತು. ಪದ್ಮಾವತಿಯು ತಾನು ಕಂಡ ಉಪಾಯವನ್ನೆಲ್ಲಾ ಮಾಡಿದಳು. ಆದರೆ ವ್ಯರ್ಥವಾಯಿತು. ಏತಕ್ಕಾಗಿ ಅಳುತ್ತಿದೆಯೋ ಎಂದು ಚಿಂತಾಕ್ರಾಂತಳಾದಳು. "ಹತ್ತಿರದ ಡಾಕ್ಟರು ಯಾರಿಗಾದರೂ ತೋರಿಸಬೇಡವೇ?" ಎಂದು ಅರವಿಂದನ ಕಡೆಗೆ ಬೇಡಿಕೆಯ ದೃಷ್ಟಿಯಿಂದ ನೋಡಿದಳು. ಅರವಿಂದನು ಏನುಮಾಡಲೂ ತೋರದೆ

ಕಂಗೆಟ್ಟ ; ಮಗೂ ಬಹು ಜೋರಾಗಿ ಅಳುತ್ತಲೇ ಇತ್ತು. ಸಕೆಗೇನೋ ಎಂದು ಪದ್ಮಾವತಿಯು ಫ್ಯಾನ್ ಹಾಕಿದಳು. ಆದರೂ ಸುಮ್ಮನಾಗಲಿಲ್ಲ. 'ರೈಲು' ಆಗದೇನೋ ನೋಡೋಣವೆಂದು ಗಾಡಿಯಿಂದ ಕೆಳಕ್ಕಿಳಿದಳು. ಆದರೂ ಮಗು ಅಳುತ್ತಲೇ ಇತ್ತು. ಆ ವೇಳೆಗೆ ಆಗಾಡಿಯ ಬಳಿಗೆ ಬಂದ ಹದಿನೆಂಟಿಪ್ಪತ್ತು ವರುಷದ ತಿರುಕಿಯಂತಿದ್ದವಳೊಬ್ಬಳು "ತಾಯೀ ! ಧರ್ಮ !!" ಎಂದು ಕೈಚಾಚಿದಳು. ಅವಳ ಧ್ವನಿಯನ್ನು ಕೇಳುತ್ತಲೇ ಮಗುವು ಅಳು ನಿಲ್ಲಿಸಿತು; ಅಲ್ಲದೇ ಅವಳ ಮುಖವನ್ನು ಕಂಡು ಅವಳ ಕಡೆಗೆ ಕೈಚಾಚಿ ಅತ್ತಿತು. ಪದ್ಮಾವತಿಗೆ ಅವಳ ಕೈಗೆ ಮಗುವನ್ನು ಕೊಡಲಿಷ್ಟವಿಲ್ಲದಿದ್ದರೂ, ಅರವಿಂದನು 'ಪರೀಕ್ಷೆ ಮಾಡೋಣವೆಂದು ಹೇಳಿ, ಕೊಡೆಂದನು. ಅವಳ ಬಳಿಗೆ ಹೋಗುತ್ತಲೇ ಮಗು ಸುಮ್ಮನಾಯಿತು. ಅರವಿಂದನು ಅವಳನ್ನು ಕುರಿತು "ಈ ಮಗುವನ್ನು ನೋಡಿದ್ದೆಯಾ?" ಎಂದ. ಅವಳು ಇಲ್ಲವೆಂದು ತಲೆಯಲ್ಲಾಡಿಸಿದಳು. 'ಸರಿ ಕೊಟ್ಟುಬಿಟ್ಟು ಹೋಗು' ಎಂದು ಗದರಿಸಿದ ಅವಳು ಸರಾಗವಾಗಿ ಮಗುವನ್ನು ತನ್ನ ಸೆರಗಿನಿಂದ ಕಿತ್ತು ಅಳುತ್ತಿದ್ದರೂ ಲಕ್ಷಿಸದೆ ಪದ್ಮಾವತಿಗೆ ಕೊಟ್ಟು ಹೊರಡುಬಿಡುವುದರಲ್ಲಿದ್ದಳು ; ಆದರೆ ಮಗುವು ಮತ್ತೆ ಮತ್ತೆ ಕೈಚಾಚಿ ಅವಳ ಕಡೆಗೆ ಜಾರುತ್ತಾ ಅಳುತ್ತಿತ್ತು ಈ ಸಂಕಟವನ್ನು ನೋಡಲಾರದೆ ಪದ್ಮಾವತಿಯು "ಅಲ್ಲರೀ ! ಇವಳನ್ನ ನಮ್ಮ ಜೊತೇಲಿ ಕರಕೊಂಡು ಹೋಗಿ ನಮ್ಮ ಮನೇಲಿ ಕೆಲಸಕ್ಕೆ ಯಾಕಿಟ್ಟುಕೊಳ್ಳಬಾರದೂ? ಹ್ಯಾಗೂ ಮನೆಗೆ ಮಗು ಬಂದಿದೆ; ಅದಕ್ಕೊಬ್ಬಳು ಆಯಾನೂ ಬೇಕಲ್ಲವೇ?" ಎಂದಳು. ರೈಲು ಹೊರಡಲು ಒಂದು ನಿಮಿಷ ಮಾತ್ರವಿತ್ತು. ಮಗು ಅಳುತ್ತಲೇ ಇತ್ತು. "ನೀನು ಒಳಕ್ಕೆ ಬಾ ! ನೋಡೋಣ ! ಹೊತ್ತಾಯಿತು" ಎಂದು ಸಿಡುಕಿದ. "ತನ್ನ ಜನ್ಮದಲ್ಲಿ ಇಂದೇ ಗಂಡನು ಹೀಗೆ ಸಿಡುಕಿದುದು—ತಾನು ಗ್ರಾಜುಏಟ್ ಎಂಬುದನ್ನು ಮರೆತು. ಇರಲಿ-ಮಗುವಿಗಾಗಿ ಎಲ್ಲವನ್ನೂ ಸೈರಿಸಬೇಕು." ಅಂದುಕೊಂಡು ಪದ್ಮಾವತಿಯು ಅಳುವ ಮಗುವನ್ನೆತ್ತಿಕೊಂಡು ರೈಲು ಹತ್ತಿ ಬಂದಳು. ರೈಲು ಕೂಗಿತು ; ಮಗುವು ಅಳುತ್ತಲೇ ಇತ್ತು. ಪದ್ಮಾವತಿಯು ದಿಕ್ಕುತೋರದೇ "ಲೇ ತಿರುಪೆಯವಳೇ ! ಬಂದುಬಿಡು ! ಗಾಡಿ ಹತ್ತು ! ಬೇಗಬಾ ! ರೂಪಾಯಿ ಕೊಡುತ್ತೇನೆ" ಎಂದುಬಿಟ್ಟಳು. ಸ್ವಲ್ಪ

ದೂರ ಹೊರಟು ಹೋಗಿದ್ದ ಅವಳು ಸರ್ರನೆ ಬಂದು ರೈಲು ಹತ್ತಿ ಒಳಕ್ಕೆ ಬಂದುಬಿಟ್ಟಳು. ಅರವಿಂದನ ತಲೆಯು ವಿಚಾರ ಶೂನ್ಯವಾಗಿಬಿಟ್ಟಿತು. ತೆಪ್ಪಗೆ ಮೂಕಾಗಿ ಮಂಕನಂತೆ ಕುಳಿತುಬಿಟ್ಟ. ಪದ್ಮಾವತಿಯು ಮಗುವನ್ನು ಅವಳ ಕೈಗೆಕೊಟ್ಟು, ತನ್ನ ಪೆಟ್ಟಿಗೆಯನ್ನು ತೆಗೆದು, ಹಳೆಯದೊಂದು ರೇಷ್ಮೆಯ ಸೀರೆಯನ್ನು ಕುಪ್ಪಸವನ್ನು ತೆಗೆದು ಅವಳಿಗೆ ಕೊಟ್ಟು "ಆ ಬಾತ್ ರೂಮೆದುರಿಗಿದೆ. ಒಳಗೆ ಹೋಗಿಚೆನ್ನಾಗಿ ಮೈತೊಳೆಕೊಂಡು, ನಿನ್ನೀ ಹರಕು ಸೀರೆಯನ್ನು ತೆಗೆದು ಕಿಟಕಿಯಿಂದೆಸೆದು ಈ ಸೀರೆ ಕುಪ್ಪಸಗಳನ್ನುಟ್ಟುಬಾ" ಎಂದು ಹೇಳಿ ಅಳುತ್ತಿದ್ದ ಮಗುವನ್ನು ತಾನೇ ಎತ್ತಿಕೊಂಡು ಅಂದು ಬೆಳಗ್ಗೆ ಹೊಸದಾಗಿ ಕೊಂಡುತಂದಿದ್ದ ಫೀಡಿಂಗ್ ಬಾಟಲ್‌ಗೆ ಥರ್ಮೋಫ್ಲ್ಯಾಸ್ಕಿನಿಂದ ಹಾಲು ಹಾಕಿ ಕುಡಿಸುತ್ತಿದ್ದಳು. ಹದಿನೈದು ನಿಮಿಷದಲ್ಲಿ ಮಗು ಹಾಲು ಕುಡಿಯುತ್ತಾ ನಿದ್ದೆ ಹೋಗಿದ್ದಿತು. ಸ್ವಲ್ಪ ಹೊತ್ತಿಗೆ ಬಾತ್‌ರೂಂ ಬಾಗಿಲು ತೆಗೆಯಿತು. ಹೊರಬಿದ್ದ 'ಭಿಕಾರಿಣಿ'ಯನ್ನು ನೋಡಿ ಗಂಡಹೆಂಡಿರಿಬ್ಬರೂ ಆಶ್ಚರ್ಯಗೊಂಡರು. ಅರವಿಂದನ ಮನಸ್ಸಿಗೆ ಮದುವೆಗೆ ಮುಂಚೆ ತೆಳ್ಳಗಿದ್ದ ಪದ್ಮಾವತಿಯನ್ನು ನೋಡಿದ ನೆನಪಾಯಿತು. ಹೆಚ್ಚು ಹೊತ್ತು ನೋಡಿದರೆ ಹೆಂಡತಿಯೇನಾದರೂ ತಿಳಿದುಕೊಂಡಾಳೆಂದು ಪ್ಲಾಟ್‌ಫಾರಂನಲ್ಲಿ ಕೊಂಡಿದ್ದ ಪತ್ರಿಕೆಯನ್ನು ನೋಡುತ್ತಾ ಮುಖವನ್ನು ಮರೆಮಾಡಿಕೊಂಡ.

## ೧೦

ನಾಲ್ಕು ವರುಷಗಳು ಕಳೆದಿದ್ದುವು. ಅರವಿಂದ ಪದ್ಮಾವತಿಯರು ಮುದುಕರಾಗುತ್ತ ಬಂದಂತೆ ಕಂಡರೂ, ಅವರ ಬಾಳಿಗೊಂದು ಬೆಳಕು, ಜೀವನಕ್ಕೊಂದು ಗುರಿ, ಅಂತಃಕರಣಕ್ಕೊಂದು ಆಧಾರವಾಗಿ ಆ ಗಂಡು ಮಗು "ವಸಂತಕುಮಾರ್" ಸಿಕ್ಕಿದ್ದರಿಂದ, ಮನಶ್ಶಾಂತಿ ಸಮಾಧಾನದಿಂದ ನೆಮ್ಮದಿಯಾಗಿಯೇ ಕಳೆದಿದ್ದರು. ಮಧ್ಯೆ ಮಧ್ಯೆ ಮಗುವಿಗೆ ಬಂದಿದ್ದ, ದಡಾರ, ನಾಯಿಕೆಮ್ಮಲು, ಆಗಾಗ ಬರುತ್ತಿದ್ದ ಶೀತಜ್ವರ, ನೆಗಡಿ ಇತ್ಯಾದಿಗಳ ಕಾಲದಲ್ಲಿ ಇಬ್ಬರೂ ಹಗಲು ರಾತ್ರಿ ಬಿಟ್ಟ ಕೆಲಸವನ್ನೆಲ್ಲಾ ಬಿಟ್ಟು ನಿದ್ದೆಗೆಟ್ಟು ಕಂಡ ಕಂಡ ಔಷಧೋಪಚಾರಗಳನ್ನೆಲ್ಲಾ ಮಾಡುತ್ತಿದ್ದಾಗ

ಪಡುತ್ತಿದ್ದ ಚಿಂತೆ, ಕೊರತೆ, ಆತಂಕ, ಘಾಬರಿಯ ದಿವಸಗಳನ್ನು ಬಿಟ್ಟರೆ, ನಾಲ್ಕು ವರುಷದ ಬಹುಭಾಗವನ್ನು ಸಂತೋಷದಿಂದಲೇ ಕಳೆದರೆನ್ನಬೇಕು. 'ಪುಣ್ಯಕ್ಕೆ' ದಾರಿಯಲ್ಲಿ ಸಿಕ್ಕಿದ ಆಯಾ 'ಸುಮಿತ್ರಾ' ಮಗುವನ್ನು ತಾಯಿಗಿಂತ ಹೆಚ್ಚಾಗಿ ನೋಡಿಕೊಳ್ಳುತ್ತಿದ್ದಳು. ಮಗುವಿಗೇನಾದರೂ ಆಲಸ್ಯವಾದರೆ ಪದ್ಮಾವತಿಗಿಂತ ಹೆಚ್ಚಾಗಿ ಕೊರಗಿ ಕಣ್ಣೀರಿಡುತ್ತಿದ್ದಳು. ಈ ಆಯಾ ಮತ್ತು ಮಗುವಿನ ಪರಸ್ಪರ ಪ್ರೇಮವನ್ನು ಕಂಡು ಈ 'ತಂದೆ ತಾಯಿಗಳ' ಸಂತೋಷಕ್ಕಿಂತ, ನೋಡಿದವರ ಆಶ್ಚರ್ಯವೇ ಹೆಚ್ಚಾಗಿದ್ದಿತು. ಈಚೆಗೆ ಆಯಾ ಸುಮಿತ್ರಾ ಒಂದು ಚೊಕ್ಕಟ ಶುಭ್ರವಾದ ಸುಂದರಿಯಾಗಿಯೇ ಇದ್ದಳು. ಅರವಿಂದನು ಹಲವಾರು ಬಾರಿ ಅವಳನ್ನು ಯಾರಿಗಾದರೂ ಮದುವೆಮಾಡಿಸಿ ಬಿಡಬೇಕೆಂದು ಸಹಾ ಯೋಚಿಸಿದ್ದನು-ಏಕೆಂದರೆ ಹಲವು ಪುಂಡಜನರು ಅವಳನ್ನು ಆಗಾಗ ಅರವಿಂದನ ಹೆಸರೆತ್ತಿ ರೇಗಿಸುತ್ತಿದ್ದರೆಂದು. 'ವಸಂತ ಕುಮಾರ್'ನು ರಾಜಕುಮಾರನಂತೆ ಬೆಳೆದ ಭಾನುವಾರ ಬಂದರೆ 'ಪುಟ್ಟೂ' ಮತ್ತೂ 'ಚಿಕ್ಕಪುಟ್ಟೂ' ತಪ್ಪದೇ ವಸಂತಕುಮಾರನೊಡನೆ ಆಡಲು ಬರುತ್ತಿದ್ದರು. ಒಂದೊಂದು ಭಾನುವಾರ ಅನ್ನಪೂರ್ಣೆಯೂ ಅಶೋಕನೂ ತಮ್ಮ ಎರಡೂವರೆ ವರುಷದ ಅನುಸೂಯೆಯನ್ನೂ ಕರೆದು ಕೊಂಡು ಬಂದುಬಿಡುತ್ತಿದ್ದರು. ಅರವಿಂದನ ಮನೆಯು ಅವರ ಹೆಬ್ಬಯಕೆಯಂತೆ ಬೆಳಕಾದುದನ್ನು ಕಂಡು ಈ ದಂಪತಿಗಳಿಗೆ ಎಷ್ಟೋ ಆನಂದ. ಎಲ್ಲರೂ ಸೇರಿದಾಗ ತಮ್ಮ ನಾಲ್ವರ ನಾಲ್ಕು ಮಕ್ಕಳ ಭವಿಷ್ಯದ ವಿಚಾರವಾಗಿಯೇ ಮಾತನಾಡುವರು. ಸಂತೋಷಪಡುವರು.

* * * * *

'ವಸಂತ'ಕುಮಾರನಿಗೆ ಐದು ವರುಷದ ಹುಟ್ಟಿದ ಹಬ್ಬವನ್ನು ಮಾಡಬೇಕೆಂದು ಬಯಸಿ, ಅಸಾಧ್ಯ ಸಿದ್ಧತೆಗಳನ್ನು ಮಾಡಿಕೊಂಡು, ತಮ್ಮ ಹಳೆಯ ಹೊಸ ಇಷ್ಟಮಿತ್ರರನ್ನೂ, ದೂರದೂರದ ನೆಂಟರಿಗೆಲ್ಲಾ ಆಹ್ವಾನಗಳನ್ನು ಕಳುಹಿಸಿದರು. ಪದ್ಮಾವತಿಯ ಅಭಿಲಾಷೆಯಂತೆ ಅನ್ನಪೂರ್ಣೆಯು ಮಕ್ಕಳೊಂದಿಗೆ ಅಲ್ಲೇ ನಾಲ್ಕು ದಿನ ಮುಂಚಿತವಾಗಿಯೇ 'ಮೊಕ್ಕಾಂ' ಮಾಡಿದಳು. ಹುಟ್ಟಿದ ಹಬ್ಬದ ದಿನ ಪದ್ಮಾವತಿಯ ಸಡಗರವನ್ನು ವರ್ಣಿಸಲು ಸಾಧ್ಯವಿಲ್ಲ. ಬೆಳಗಿನ ಜಾವ ಹೊತ್ತಿಗೆ ಮುಂಚೆ ಎದ್ದು 'ಸುಮಿತ್ರೆ'

ಯನ್ನೆಬ್ಬಿಸಿ, 'ವಸಂತನಿಗೆ' ನೀರೆರೆದು, ಹೊಸದಾಗಿ ಹೊಲಿಸಿದ ಕಿಂಕಾಪಿನ ಸುರ್‍ವಾಲ್, ಷೇರ್‍ವಾಣಿ, ಜರತಾರೀ ಟೋಪಿಯನ್ನು ಹಾಕಿ, ಕತ್ತಿಗೆ ನಾಲ್ಕೆಳೆಯ ಚೈನು, ಕಾಸಿನಸರ ಎರಡೆಳೆಯ ಮುತ್ತಿನ ಹಾರ, ಕೈಗೆ ಚಿನ್ನದ ಬಳೆಗಳು, ವಜ್ರದ ಉಂಗುರಗಳನ್ನಿಟ್ಟು ಅಲಂಕರಿಸಿ, ದೃಷ್ಟಿ ತೆಗೆದಳು. 'ಮಗು'ವಿಗೆ ಊಟ ತಡವಾದೀತೆಂದು ಹತ್ತುಘಂಟೆಗೇ ಎಲೆಹಾಕಲು ಅಣಿಯಾಗುವಂತೆ ಹಿಂದಿನ ದಿನದಿಂದ ಭಕ್ಷ್ಯಗಳ ಸಿದ್ಧತೆಯನ್ನು ಮಾಡಿಸಿದ್ದಳು.

ಆ ದಿನ 'ವಸಂತ ಮಹಾಲಿ'ನಲ್ಲಿ ಅಪೂರ್ವವಾದ ಸಡಗರ. ಹಿಂದೆ ವಸಂತರಾಯನ ಕಾಲದಲ್ಲಿ ಶ್ರೀ ಶಿವದಾಸರೇ ಮೊದಲಾದ ಸಾಧುಗಳು ಬಂದಾಗ ನೆರೆಯುತ್ತಿದ್ದ ಜನರ ಸಂದಣಿಯ ಎರಡರಷ್ಟು ಜನ. ಬಗೆಬಗೆಯ ಜನ. ಬಗೆಬಗೆಯ ಮಾತುಗಳು-ಕುಹಕ-ಕುಚೋದ್ಯಗಳು. ಬಗೆಬಗೆಯ ಸದ್ದುಗಳು; ಗದ್ದಲಗಳು. ಅಂತೂ ಬಹು ವಿಜೃಂಭಣೆಯಿಂದ ಊಟ ಉಪಚಾರಗಳೂ, ರಾತ್ರಿಯ ಆರತಿ ಅಕ್ಷತೆಗಳೂ ನಡೆದುವು. ಯಾರ ಕೈಲಿ ನೋಡಿದರೂ ಲಾಡೂ ಚಕ್ಲಿ ಉಂಡೆಗಳೇ! ಯಾರ ಬಾಯಲ್ಲಿ ನೋಡಿದರೂ ಪದ್ಮಾವತಮ್ಮನ ಮಗ 'ವಸಂತಕುಮಾರ'ನ ಸೌಂದರ್ಯ ವೈಭವಗಳ ಸ್ತೋತ್ರವೇ!

* * * *

ಅಂದು ರಾತ್ರಿ ವಸಂತಕುಮಾರನು ಬೇಗಲೇ ತನ್ನ ಮಂಚದ ಮೇಲೆ ನಿದ್ದೆಹೋದ. ಹಸೆಯಮಣೆಯ ಮೇಲೆ ಹಾಕಿಕೊಂಡಿದ್ದ ಆಭರಣಗಳನ್ನಾಗಲೀ ಉಡುಪುಗಳನ್ನಾಗಲೀ ತೆಗೆದು ಸಹಾ ಇರಲಿಲ್ಲ. 'ಆಯಾ' ಸುಮಿತ್ರಾ ತೆಗೆಯಲು ಹೋದರೆ "ಬೇಡ; ಮಗೂ ಎದ್ದೀತೆ"ಂದು ಪದ್ಮಾವತಿಯು ಗದರಿಸಿದಳು. ಮನೆಯಲ್ಲಿ ಇವರೆಲ್ಲಾ ಮಲಗಿದಾಗ ರಾತ್ರಿ ಹನ್ನೊಂದೂವರೆ ಘಂಟೆಯಾಗಿದ್ದಿತು. ವಸಂತನ ಪಕ್ಕದಲ್ಲಿ ನೆಲದ ಮೇಲೆ ಆಯಾ ಹೋಗಿ ಮಲಗಿದಳು. ಅರವಿಂದ ಮತ್ತೂ ಪದ್ಮಾವತಿ ಪಕ್ಕದ ರೂಮಿನಲ್ಲಿ ಮಲಗಿದರು. ಅಶೋಕನು ತನ್ನ ಮನೆಯಲ್ಲಿ ಯಾರಾದರೂ ಮಲಗಲೇಬೇಕೆಂದು ಹೊರಟುಹೋಗಿದ್ದನು. ಆದುದರಿಂದ ಹಾಲಿನಲ್ಲಿ ಅನ್ನಪೂರ್ಣೆ, ತನ್ನ ಮೂವರು ಮಕ್ಕಳೊಂದಿಗೆ ಮಲಗಿದ್ದಳು. ನಾಲ್ಕೈದು

ದಿವಸದ ಓಡಾಟದಿಂದ ಸೋತಿದ್ದ ಅವಳಿಗೆ 'ನೆಲಕ್ಕೆ ತಲೆ ಕೊಟ್ಟೇನೇ' ಎಂದೆನಿಸುತ್ತಿದ್ದುದರಿಂದ, ಮಲಗುತ್ತಲೇ ಗಾಢವಾದ ನಿದ್ದೆ ಬಂದುಬಿಟ್ಟದ್ದಿತು.

ಬೆಳಿಗ್ಗೆ ಅರವಿಂದನಿಗೇ ಮೊದಲೇ ಎಚ್ಚರವಾದದ್ದು; ಆದರೂ ಆಗಲೇ ಏಳೂವರೆ. ಘಂಟೆಯಾಗಿಬಿಟ್ಟಿದ್ದಿತು. ಪದ್ಮಾವತಿಯನ್ನೆಬ್ಬಿಸದೆ ತಾನು ಮುಖ ತೊಳೆಯೋಣವೆಂದು ಬಾಗಿಲು ತೆರೆದು ಹೊರಕ್ಕೆ ಬಂದ. ಹಾಗೇ 'ಮಗ'ನನ್ನೊಮ್ಮೆ ನೋಡೋಣವೆಂದು ಆ ಕೋಣೆಯ ಕಡೆಗೇ ತಿರುಗಿದ ನೋಡುತ್ತಿದ್ದಂತೆಯೇ ಎದೆ "ಧಡೇಲ್ !" ಎಂದುಬಿಟ್ಟಿತು. "ಪದ್ಮಾ!" ಎಂದು ಚೀರುತ್ತಾ ಅಲ್ಲೇ ತಲೆಯಮೇಲೆ ಕೈಯಿಟ್ಟು ಕೂತುಬಿಟ್ಟ. ಮಲಗಿದ್ದ ವರೆಲ್ಲರೂ ಗಾಬರಿಯಿಂದೆದ್ದು ಓಡಿ ಬಂದರು. ಈ ವೇಳೆಗೆ ಅಶೋಕನೂ ಹೊರಗಿನಿಂದ ಬಂದ.

'ಮಗ' ವಸಂತನೂ ಇಲ್ಲ. 'ಆಯಾ' ಸುಮಿತ್ರೆಯೂ ಇಲ್ಲ. ಮನೆಯೆಲ್ಲಾ ಹುಡುಕಿದ್ದಾಯಿತು. ಎಲ್ಲೂ ಇಬ್ಬರ ಪತ್ತೆಯೂ ಇಲ್ಲಾ. ಪದ್ಮಾವತಿಯು ತಲೆ ತಲೆ ಪರಚಿಕೊಳ್ಳುತ್ತಾ, ಎದೆ ಎದೆ ಬಡಿದುಕೊಳ್ಳುತ್ತಾ ಅಳುತ್ತಿದ್ದ ರೋದನ ವನ್ನು ಕೇಳಿ ನೆರೆಹೊರೆಯವರೆಲ್ಲಾ ನೆರೆದರು. ಹಲವು ಜನರು 'ಪೋಲೀಸ್‌ಗೆ ಕಂಪ್ಲೇಂಟ್ ಕೊಡಿರಿ' ಎಂದು ಸಲಹೆ ಮಾಡುತ್ತಾ ಒತ್ತಾಯಪಡಿಸುತ್ತಿದ್ದರು. ಅರವಿಂದನು ಕಂಗೆಟ್ಟು ಕುಕ್ಕರಿಸಿಬಿಟ್ಟದ್ದ. ಆ ವೇಳೆಗೆ ವಸಂತನ ಮಂಚದ ಮೇಲೆ ಪೇಪರ್ ವೈಟ್ ಹೇರಿಟ್ಟಿದ್ದ ಕಾಗದ ಸಿಕ್ಕಿತು. ಅಶೋಕನು ಗಟ್ಟಿ ಯಾಗಿ ಓದಿದ—"ಶ್ರೀಮಂತರೇ ! ನೀವು ಭಿಕಾರಿಣಿಯಾದ ನನ್ನನ್ನೂ ನನ್ನ ಮಗನನ್ನೂ ನಾಲ್ಕು ವರುಷದಿಂದ ಇಷ್ಟು ಪ್ರೇಮದಿಂದ ಸಾಕಿದ್ದಕ್ಕಾಗಿ ನಾನೂ ನನ್ನ ಮಗನೂ ನಿಮಗೆ ಅತ್ಯಂತ ಋಣಿಗಳು. ಕೆಲವು ದಿನಗಳನಂತರ ಮತ್ತೆ ಬರುತ್ತೇವೆ. ನೀವು ಇಟ್ಟಿರುವ ಒಡವೆಯು ನಮ್ಮ ಮುಂದಿನ ಜೀವನಕ್ಕೆ ಸಾಕು. ಶ್ರೀಮಂತರಾದ ನಿಮ್ಮ ಹಣವು ಸದ್ವಿನಿಯೋಗವಾಗಿದೆ. ನಮಸ್ಕಾರಗಳು—ಆಯಾ" ಕೇಳುತ್ತ ಕೇಳುತ್ತ ಪದ್ಮಾವತಿಯು ಮೂರ್ಛೆ ಹೋದಳು ಎಚ್ಚತ್ತಮೇಲೆ ಪೋಲೀಸ್‌ಗೆ ತಿಳಿಸಕೂಡದೆಂದೂ, ತಿಳಿಸಿದರೆ ತನ್ನ ಮಗುವಿಗೆ ತೊಂದರೆಯಾಗುವುದೆಂದೂ ಹೇಳಿ 'ವಸಂತಾ ! ವಸಂತಾ !' ಎಂದು ಗೋಳಾಡುತ್ತಿದ್ದಳು. ಹೊರಗಡೆ ನೆರೆದಿದ್ದ ಜನರು ಬಗೆಬಗೆಯಾಗಿ ಮಾತ ನಾಡಿಕೊಳ್ಳುತ್ತಿದ್ದರು. "ಅಲ್ಲರೀ ! ಅವಳ ಮಗನ್ನ ಅವಳು ಕರೆಕೊಂಡು

ಹೋದರೆ ಇವರಿಗೇನು ದುಗ್ತೇ?" "ಮಗು ಅವಳದೇನ್ನೋದಕ್ಕೆ ರುಜುವಾತೇ ಇಲ್ಲವಲ್ಲಾ !" "ಇವರಿಗೆ ಮಗೂ ಸಿಕ್ಕಿದ ದಿವಸದಿಂದ ಅವಳೂ ಜೊತೇಲಿದ್ದೇ ಇದಾಳಂತೆ." "ಸುಖವಾಗಿ ಸಾಕಿಕೊಂಡಿದ್ದರು. ಯಾಕೆ ಹೊರಟು ಹೋದಳೋ ?" "ಅವಳೂ ಚೆಲುವೆ ಹೆಣ್ಣು....ಯಾರು ಕಂಡೋರು... ಮುಸುಕಿನೊಳಗುದ್ದನಾ?" "ಪೋಲೀಸ್‌ಗೆ ಕಂಪ್ಲೇಂಟ್ ಕೊಟ್ಟರೆ ವಿಚಾ ರಣೆಗೆ ಬಂದು—'ನಿಮಗೆ ಮಗೂ ಹ್ಯಾಗೆ ಸಿಕ್ಕಿತು?' 'ಸಿಕ್ಕಿದ ಮಗೂನ ಕೊಲ್ಲಾಪುರದಲ್ಲೇ ಪೋಲೀಸ್ ಸ್ಟೇಷನ್‌ಗೆ ಒಪ್ಪಿಸದೇ, ಹ್ಯಾಗೆ ಕರೆಕೊಂಡು ಬಂದಿರೀ?'ಂತ ಇವರಿಗೇ ಬರುತ್ತೇ ಪೀಕಲಾಟ !" "ಏನೋ ಪಾಪ ! ಆಕೆ ಗೋಳು ನೋಡಯ್ಯಾ !" "ಗ್ರಾಜುಯೇಟ್ ಹೆಂಗಸರು ಕಂಡೋರ ಮಗೂಗೆ ಅಳೋದನ್ನ ನಾನು ಇವತ್ತೇ ಕಣಯ್ಯಾ ನೋಡಿದ್ದು." "ಲೋ ಸಾಕೋ ನಿನ್ನ ಕುಚೋದ್ಯ ! ಎರಡು ದಿನ ಹತ್ತಿರಿದ್ದ ಫೌಂಟೆನ್ ಪೆನ್ ಕಳೆದುಹೋದರೆ ಅನ್ನ ನೀರು ಬಿಟ್ಟು ಹೊಡೆಕೊಂಡುಬಿಡುತೀವಿ ನಾವು. ಗ್ರ್ಯಾಜುಯೇಟ್ ಆದರೇನು ಆಕೆ ಹೆಣ್ಣಲ್ಲವೇ ? ಹೆರದೇ ಹೋದರೂ ಮಮತೆಯಿಂದ ನಾಲ್ಕು ವರುಷ ಸಾಕಲಿಲ್ಲವೇ ?" ಇತ್ಯಾದಿ ಇತ್ಯಾದಿಯಾಗಿ.

ಮೂರು ತಿಂಗಳು ಕಳೆದಿದ್ದುವು. ಅರವಿಂದ ಮತ್ತೂ ಪದ್ಮಾವತಿಯ ಅನುರೋಧದಂತೆ ಅಶೋಕನು ತನ್ನ ವಾರ್ಡನ್ ಕೆಲಸಕ್ಕೆ ರಾಜೀನಾಮೆ ಕೊಟ್ಟು ಹೆಂಡತಿ ಮತ್ತು ಮೂವರು ಮಕ್ಕಳೊಂದಿಗೆ ಹಿಂದಿರುಗಿ ಬಂದು 'ವಸಂತ ಮಹಲಿ'ನಲ್ಲೇ ಅವರೊಂದಿಗೆ ವಾಸಿಸತೊಡಗಿದರು. ಅರವಿಂದ ನೇನೋ ತನ್ನ ಮಗನ ದುಃಖವನ್ನು ಮರೆಯುತ್ತ ಬಂದ; ಆದರೆ ಪದ್ಮಾ ವತಿಗೆ ಅದು ದುಃಸ್ಸಾಧ್ಯವಾಯಿತು. ಗಂಡನಂತೆ ತಾನೂ ಅವನನ್ನು ಮರೆಯಲು 'ಚಿಕ್ಕಪುಟ್ಟು' 'ಅನಸೂಯಾ' ಇವರೊಂದಿಗೆ ಆಟವಾಡುತ್ತಾ ಇದ್ದ ಸಮಯದಲ್ಲಿ ಆ ಮಕ್ಕಳ ಯಾವುದಾದರೂ ಒಂದು ಪ್ರಶ್ನೆಯಿಂದ 'ವಸಂತ'ನ ನೆನಪು ನುಗ್ಗಿ ಬಂದು ಕಣ್ಣೀರು ಕಾರಿಸುತ್ತಿದ್ದಿತು. ಕೊನೆಗೆ ಅಶೋಕನಾದಿಯಾಗಿ ಕೆಲವು ಇಷ್ಟಮಿತ್ರರ ಸಲಹೆಯಂತೆ ಬಂಗಲೆಯ ಮುಂಭಾಗದಲ್ಲಿದ್ದ ಬಯಲಿನಲ್ಲಿ ಶಿಶು ವಿಹಾರವನ್ನು ತೆರೆಯುವ ಯೋಚನೆಯು ನಿರ್ಧಾರವಾಯಿತು. ಅಶೋಕನ ಸ್ನೇಹಿತನಾದ ಇಂಜನಿಯರೊಬ್ಬನು ತಾನೇ ಇದರಲ್ಲಿ ಶ್ರದ್ಧೆ ವಹಿಸಿ, ನಾಲ್ಕು ತಿಂಗಳಲ್ಲಿ ಒಂದು ನೂರು ಮಕ್ಕಳ

ಗಾಗುವಂಥ ಮುದ್ದಾದ ಕಟ್ಟಡವನ್ನು ಕಟ್ಟಿ, ಒಳಗಡೆ ಒಂದೊಂದು ಮಗುವಿಗೂ ಒಂದೊಂದು ಪುಟ್ಟ ಕುರ್ಚಿ, ಪುಟ್ಟ ಮೇಜು, ಪುಟ್ಟ ಬೀರುಗಳನ್ನೂ ಮಾಡಿಸಿಟ್ಟುಬಿಟ್ಟ. ಪದ್ಮಾವತಿಯು ಮಗನಿಗಾಗಿ ಆಗಾಗ ಕೊಂಡಿದ್ದ ನಾಲ್ಕು ಆಲ್ಮೆರಾಗಳ ಬಗೆಬಗೆಯಾದ ಬೊಂಬೆ, ಆಟದ ಸಾಮಾನುಗಳನ್ನೂ ಅಲ್ಲಿಗೇ ಸಾಗಿಸಿಬಿಟ್ಟಳು. ಒಂದು ತಿಂಗಳಲ್ಲೇ ಶಿಶುವಿಹಾರದ ಪಕ್ಕದಲ್ಲಿ ಕಟ್ಟಿದ ಪುಟ್ಟ ತಂತಿಯ ಮನೆಯಲ್ಲಿ ಪಾರಿವಾಳಗಳು, ನವಿಲುಗಳು, ಮೊಲಗಳು, ಗಿಳಿಗಳೇ ಮೊದಲಾದ ಸಾಕುಪಕ್ಷಿಗಳೂ ಪ್ರಾಣಿಗಳನ್ನೆಲ್ಲಾ ತಂದಿಟ್ಟರು. ಅಶೋಕನು ಮಕ್ಕಳಿಗೆ ಬೇಕಾದ ಪಶು. ಪಕ್ಷಿ, ಕೀಟ, ಮರ, ಗಿಡ, ಮೃಗಗಳೇ ಮೊದಲಾದ ಸೃಷ್ಟಿಯ ಸಮಸ್ತ ವಸ್ತುಗಳ ದೊಡ್ಡ ದೊಡ್ಡ ಚಿತ್ರಪಟಗಳನ್ನೆಲ್ಲಾ ತರಿಸಿ, ಶಿಶುವಿಹಾರದ ಗೋಡೆಗಳನ್ನೆಲ್ಲಾ ಅಲಂಕರಿಸಿದ. ಹೊರಗಡೆ ಉಯ್ಯಾಲೆ, ಜಾರುವ ಬಂಡೆ, ಸೀಸಾ, ಮರಳುಗುಂಡಿ, ಮೊದಲಾಗಿ ಮಕ್ಕಳ ಆಟಕ್ಕೆ ಅತ್ಯಗತ್ಯವಾದ ಸಾಮಾನುಗಳೆಲ್ಲಾ ಸಿದ್ಧವಾಗಿಬಿಟ್ಟವು. ಈ ಎಲ್ಲ ಸಿದ್ಧತೆಗಳಾಗುತ್ತಿದ್ದಾಗ ಪದ್ಮಾವತಿಯ ಮನಸ್ಸು ಸ್ವಲ್ಪ ನೆಮ್ಮದಿಯಾಗಿತ್ತು. ಆದುದರಿಂದ ಅರವಿಂದನು "ನೀನೇ ಈ ಶಿಶು ವಿಹಾರವನ್ನು ನಡೆಸಬೇಕು. ನಾನು ಲಾಯರ್ ಕೆಲಸವನ್ನು ಬಿಟ್ಟು ಬಿಟ್ಟು ನಿನ್ನ ಕೆಲಸಕ್ಕೆ ಸಹಾಯ ಮಾಡುತ್ತೇನೆ" ಎಂದು ವಾಗ್ದಾನ ಮಾಡಿದ. ಅಶೋಕನ ಸಲಹೆಯಂತೆ ಅನ್ನಪೂರ್ಣೆಯು ಮಕ್ಕಳಿಗೆ ಪ್ರಾರ್ಥನೆ, ಹಾಡು, ಮಕ್ಕಳ ಪದಗಳೇ ಮೊದಲಾದುವನ್ನು ಕಲಿಸಲು ಪ್ರೀತಿಯಿಂದ ಒಪ್ಪಿಕೊಂಡಳು.

ಶುಭ ಲಗ್ನದಲ್ಲಿ ರಾಮಾಜೋಯಿಸರು "**ವಸಂತ ಶಿಶುವಿಹಾರ**"ದ ಗೃಹ ಪ್ರವೇಶ ಮಹೋತ್ಸವವನ್ನು ನೆರವೇರಿಸಿದರು. ಅಂದೂ ಎಂದಿನಂತೆ ಸಂಭ್ರಮ-ಸಡಗರ. ನೂರಾರು ಜನ ದೊಡ್ಡ ಮನುಷ್ಯರೂ, ವಿದ್ಯಾಪ್ರೇಮಿಗಳೂ ಆಹ್ವಾನಿತರಾಗಿದ್ದರು. ಅಂದೇ ಶಿಶು ವಿಹಾರ ಪ್ರಾರಂಭ. 'ಚಿಕ್ಕಪುಟ್ಟು' ಉರುಫ಼್ 'ಶಿವದಾಸ್''ನೇ ಮೊದಲನೇ ಹುಡುಗ. ಅನುಸೂಯಳೇ ಮೊದಲನೆಯ ಹುಡುಗಿ. ಮೂರೇ ದಿವಸದಲ್ಲಿ ಶಿಶು ವಿಹಾರ ತುಂಬಿ ಹೋಯಿತು. ಈ ನೂರು ಮಕ್ಕಳ ಆಟಪಾಟ, ಓದುಬರೆಹ, ಹಾಡು ಹಸೆ, ಮಾತುಕತೆಗಳಲ್ಲಿ ಅರವಿಂದನಿಗೆ ಬೇರೆ ಯೋಚನೆಗೆ ಬಿಡುವೇ ಇಲ್ಲ; ಆದರೆ ಪದ್ಮಾವತಿಯು ಮಾತ್ರ "ಎಂದಾದರೂ ಒಂದು ದಿನ ವಸಂತನು ನನ್ನಲ್ಲಿಗೆ

ಬಂದೇ ಬರುತ್ತಾನೆ" ಎಂದು ನಂಬಿ ಆಗಾಗ ನಿಟ್ಟುಸಿರು ಬಿಡುತ್ತಾಳೆ. ಈಗ ಅರವಿಂದನ ಮುಹಡಿಯ ಹಾಲಿನಲ್ಲಿ ಎದುರುಗಡೆ ನಾಲ್ಕೇ ದೊಡ್ಡ ಪಠಗಳಿವೆ. ಒಂದು ತ್ರಿಮೂರ್ತಿಗಳ ಅವತಾರವಾದ ಶ್ರೀ ಗುರುಗಳದು. ಇನ್ನೊಂದು ಅರ್ಧನಾರೀಶ್ವರನದು. ಹಿಂಬದಿಯಲ್ಲಿ ಕಮಲಮ್ಮನದು — ಪಕ್ಕದಲ್ಲಿ ವಸಂತರಾಯನದು.

ವಸಂತಕುಮಾರನು ಹಿಂದಿರುಗಿ ಬಂದರೆ ಶ್ರೀ ಗುರುಗಳ ಸನ್ನಿಧಿಯಲ್ಲೇ ಅವನ ಮುಂಜಿಯನ್ನು ಮಾಡುವುದಾಗಿ ಪದ್ಮಾವತಿಯು ಹರಸಿಕೊಂಡಿದ್ದಾಳೆ. ಈ ಆಶೆಯೇ ಅವಳ ಜೀವನದ ಏಕಮಾತ್ರ ಆಧಾರವಾಗಿದೆ.

